ಕೃತಿ-೩

1985 — 1000 ಪ್ರತಿಗಳು





—: ಪ್ರಕಾಶಕರು :—

**S. ಬಾಲಕೃಷ್ಣರಾವ್ M.Sc.,**

" ಶ್ರೀ ಸೀತಾರಾಮ ನಿವಾಸ "

225, 2ನೆ ಕ್ರಾಸ್, 3ನೆ ಮೈನ್

ಹನುಮಂತನಗರ, ಬೆಂಗಳೂರು-19

**ಬೆಲೆ ರೂ. 5-00**

# ವೇದಾಂತದ ದೃಷ್ಟಾಂತಗಳು

## (ಶ್ರೀ ಶಾಂಕರ ಭಾಷ್ಯಾನುಸಾರ)




-: ಲೇಖಕರು :-

ವಿದ್ವಾನ್ ಕೆ. ಕೃಷ್ಣಜೋಯಿಸರು

ಪಂಡಿತ ಪ್ರವರ, ವೇದಾಂತ ಪ್ರಾಧ್ಯಾಪಕರು

ಶ್ರೀ ಶಂಕರಮಠ, ಬೆಂಗಳೂರು-4

## ಮುನ್ನುಡಿ

ಶ್ರೀ ಶಂಕರ ಭಗವತ್ಪಾದರು ಪ್ರಸ್ಥಾನ ತ್ರಯ ಭಾಷ್ಯಗಳಲ್ಲಿ ಅದ್ವೈತ ಸಿದ್ಧಾಂತವನ್ನು ಯುಕ್ತಿ, ಅನುಭವಗಳಿಂದ ತೋರಿಸಿ ಉಪದೇಶ ಮಾಡಿರುವುದು ಜಗತ್ಪ್ರಸಿದ್ಧವಾಗಿದೆ. ಅದ್ವೈತವೆಂಬುದೊಂದು ಮತವಲ್ಲ. ಮತ್ತೇನೆಂದರೆ ದ್ವೈತ ಅಥವಾ ಭೇದ ಪ್ರಪಂಚದಿಂದ ದೂರವಾಗಿರುವ, ಲೋಕಾತೀತವಾದ ಒಂದೇಒಂದಾಗಿ ಯಾವಾಗಲೂ ಇರುವ ಅದ್ವಿತೀಯ ಪರಬ್ರಹ್ಮ ಅಥವಾ ಪರಮಾತ್ಮ ವಸ್ತುವಿದೆ ಎಂಬುದೇ ಅದ್ವೈತವು. **"ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ ಸ ಆತ್ಮಾ ಸ ವಿಜ್ಞೇಯಃ"** ಎಂದು ಮಾಂಡೂಕ್ಯದಲ್ಲಿ ವರ್ಣಿಸಿದಂತೆ ಜಾಗರಾದಿ ಅವಸ್ಥಾತ್ರಯವನ್ನು ಮೀರಿದ ತುರೀಯ ಆತ್ಮನು, ಸರ್ವದಾ ಶಾಂತನು, ಮಂಗಳಸ್ವರೂಪನು, ದ್ವೈತವಿಲ್ಲದವನು, ಇವನೇ ನಿಜವಾದ ಆತ್ಮನು, ಬ್ರಹ್ಮಾದಿ ಸ್ತಂಭಪರ್ಯಂತವಿರುವ ಜೀವಕೋಟಿಗಳ ನಿಜ ಸ್ವರೂಪನಾದ ಪರಮಾತ್ಮನು.

ಸದಾ ಏಕರೂಪವಾಗಿ ಸಚ್ಚಿದಾನಂದ ಸ್ವರೂಪದಿಂದ ಬೆಳಗುವ ಈ ಪರಮಾತ್ಮನು ಒಬ್ಬನೇ ಆಗಿದ್ದರೆ, ಅನೇಕವಾಗಿ ಅಂದರೆ ಜೀವ, ಈಶ್ವರ ಮತ್ತು ಈ ಭೋಗ್ಯವಾದ ಸಕಲ ಪ್ರಪಂಚ, ಅನೇಕ ಜೀವರು ಇತ್ಯಾದಿ ಆದದ್ದು ಹೇಗೆ? ಸಂಸಾರವು ಹೇಗೆ ಬಂದಿತು? ಒಂದರಿಂದ ಅನೇಕ ಸೃಷ್ಟಿ ಹೇಗಾಯಿತು? ಅದು ಸತ್ಯವೇ, ಸತ್ಯವಲ್ಲವೇ? ಪದೇಪದೇ ಜೀವರು ಹುಟ್ಟುವುದು ಹೇಗೆ? ಬಂಧಕ್ಕೆ ಕಾರಣವೇನು? ಬಂಧ ವಿಮೋಚನೆ ಆಗುವುದು ಹೇಗೆ? ಇಹದಲ್ಲೋ, ಪರದಲ್ಲೋ? ಬಂಧವು ಯಾವುದರಿಂದ ಆಗುವುದು? ಅಜ್ಞಾನದಿಂದ ಆಗಿದ್ದರೆ ಅದು ಜ್ಞಾನದಿಂದ ಹೇಗೆ ಹೋಗುವುದು? ಇತ್ಯಾದಿ ಅನೇಕ ಸಂಶಯಗಳನ್ನು ನಿವಾರಿಸಲು. ದೃಷ್ಟಾಂತಗಳನ್ನು ಕೊಟ್ಟು ನಮಗೆ ಅದ್ವೈತ ಸಿದ್ಧಾಂತದ ಉಪಯುಕ್ತ ವಿಷಯಗಳನ್ನು ಶ್ರೀ ಶಂಕರರು ತಿಳಿಸಿದ್ದಾರೆ.

ಆ ದೃಷ್ಟಾಂತಗಳಲ್ಲಿ ವಿವರಿಸಿ ಹೇಳಿರುವುದನ್ನು ನಾವು ಈ **'ವೇದಾಂತ ದೃಷ್ಟಾಂತಗಳು'** ಎಂಬ ಪುಸ್ತಕದಲ್ಲಿ ಸಂಕಲನ ಮಾಡಿ

ಬರೆದು ಪ್ರಕಟಪಡಿಸಲು ಉದ್ದೇಶಮಾಡಿರುವುದಾಗಿದೆ – ಇದಕ್ಕೆ ಪ್ರೇರಕರಾಗಿ ಪ್ರೋತ್ಸಾಹಿಸಿದವರು ಶ್ರೀಮಾನ್ ಎಸ್. ಬಾಲಕೃಷ್ಣರಾಯರು ಮತ್ತು ಅವರ ಅನುಯಾಯಿಗಳು. ಇದಕ್ಕೂ ಮೊದಲು ಹನುಮಂತ ನಗರದ, 2ನೆ ಕ್ರಾಸಿನಲ್ಲಿರುವ ಇವರ '**ಶ್ರೀ ಸೀತಾರಾಮ ನಿವಾಸ**'ದಲ್ಲಿ ಸುಮಾರು ಆರೇಳು ವರ್ಷಗಳಿಂದಲೂ ಗೀತೆ, ವಿವೇಕಚೂಡಾಮಣಿ, ಶತಶ್ಲೋಕಿ, ಉಪನಿಷತ್ತು, ಪಂಚದಶಿ--ಇತ್ಯಾದಿ ವೇದಾಂತ ಗ್ರಂಥಗಳ ವಿಚಾರಪರವಾದ ಉಪನ್ಯಾಸಗಳನ್ನು ಮಾಡುತ್ತಾ ನಾನು ಬಂದಿರುವೆನು.

ಈವರೆಗೂ ಸತತವಾಗಿ ಶ್ರವಣ ಮಾಡಿರುವ ವೇದಾಂತದ ಅಭಿರುಚಿಯುಳ್ಳ ಶ್ರೋತೃಗಳಿಗೆ ಸುಲಭವಾಗಿ ತಿಳಿಯಲು ಪ್ರಸ್ಥಾನತ್ರಯದಲ್ಲೂ, ಪ್ರಕರಣ ಗ್ರಂಥಗಳಲ್ಲೂ ಶ್ರೀ ಶಂಕರಾಚಾರ್ಯರು ಕೊಟ್ಟಿರುವ ದೃಷ್ಟಾಂತಗಳಲ್ಲಿ ಸುಮಾರು 113 ದೃಷ್ಟಾಂತಗಳನ್ನು ವಿವರಿಸಿ ಈ ಪುಸ್ತಕದಲ್ಲಿ ತೋರಿಸಿದ್ದೇನೆ. ಶಾಂಕರ ದರ್ಶನದಲ್ಲಿ ಅಭಿರುಚಿಯುಳ್ಳ ಜಿಜ್ಞಾಸುಗಳು ಈ ಪುಸ್ತಕದ ಸದುಪಯೋಗವನ್ನು ಪಡೆಯಬೇಕಾಗಿ ವಿನಂತಿ ಮಾಡಿರುತ್ತೇನೆ.

ಇಂತಿ, ತಮ್ಮ ವಿಶ್ವಾಸಿ

**ವಿದ್ವಾನ್ ಕೆ. ಕೃಷ್ಣಜೋಯಿಸರು**

**ಪಂಡಿತ ಪ್ರವರ, ವೇದಾಂತ ಪ್ರಾಧ್ಯಾಪಕರು**

ಶ್ರೀ ಶಂಕರಮಠ
ಬೆಂಗಳೂರು 4
22 3-1985

## ಸದ್ಗುರು ಸ್ಮರಣಂ

ವೇದಾಂತಾಖ್ಯ ಸುಧಾಂ ಬೋಧಿ ಮಥನೇನೋದ್ಧೃತಾಮ್ಮೃತಂ ।
ಸ್ವಯಮಾಪೀಯ ಸತತಂ ಲೋಕೇಭ್ಯೋಽಪಿ ದದುಷ್ಟಯೇ ॥

ತಾನ್ ವಂದೇ ಶಂಕರಾಚಾರ್ಯಾನ್ ಜಗದ್ಗುರುವರಾನ್ ಸದಾ ।
ಪ್ರಾರ್ಥಯೇ ತತ್ಕೃಪಾದೃಷ್ಟಿಂ ತತ್ತ್ವಜ್ಞಾನಪ್ರದಾಯಿನೀಂ ॥

ವೇದಾಂತ ದೃಷ್ಟ್ವಾ ದೃಷ್ಟಾಂತಾಃ ಬಹವೋ ಯತ್ರಯತ್ರಯೇ ।
ತಾನಹಂ ಭಾಷ್ಯವಿವೃತಾನ್ ಭಾಷಯಾಹಂ ಲಿಖಾಮ್ಯಹಂ ॥

ದೃಷ್ಟಾಂತಾರ್ಥವಿಜಿಜ್ಞಾಸು ಲೋಕಾಯ ತದಿದಂ ಮಯಾ ।
ತೇಷಾಂಕೃತಂ ಸಂಕಲನಂ ಶಂಕರಾಚಾರ್ಯ ಪ್ರಸಾದತಃ ॥

ಅನೇನ ಭಗವತ್ಪಾದಾಃ ತುಷ್ಯನ್ತು ಕೃಪಯಾಮಯಿ ।
ಇತಿತಾನ್ ಪ್ರಾರ್ಥಯೇ ಭಕ್ತ್ಯಾ ವಿನಮ್ರಃ ಸತತಂ ಗುರೂನ್ ॥

ವೇದಾಂತಾರ್ಥ ವಿವೇಕಾಯ ದೃಷ್ಟಾಂತಾರ್ಥ ವಿವೇಚನಂ ।
ಯತ್ಕೃತಂತೇನ ಲೋಕಸ್ಯ ಭೂಯಾತ್ ತತ್ತ್ವಾರ್ಥ ದರ್ಶನಂ ॥

— ಕೆ. ಕೃಷ್ಣಜೋಯಿಸರು



# ವೇದಾಂತದ ದೃಷ್ಟಾಂತಗಳು

## 1. ಸೂರ್ಯ ಮತ್ತು ಪ್ರತಿಬಿಂಬ ದೃಷ್ಟಾಂತ

ಪರಂಬ್ರಹ್ಮ ಪರಮಾತ್ಮ ಎಂಬುವವನಿಗೆ ಸೂರ್ಯನ ಉಪಮಾನವನ್ನು ಕೊಟ್ಟಿರುವುದು, ಅಲ್ಲದೆ ಸೂರ್ಯನ ಪ್ರತಿಬಿಂಬವನ್ನು ಉಪಮಾನವಾಗಿಟ್ಟು ಉದಾಹರಿಸಿರುವುದು. ಹೇಗೆ ಒಬ್ಬ ಜ್ಯೋತಿರ್ಮಯನಾದ ಸೂರ್ಯನು ನಾನಾವಿಧವಾದ ಜಲಪಾತ್ರೆಗಳಲ್ಲಿ ಅಂದರೆ ಬಾವಿ, ಕೊಳ, ಕೆರೆ ಮುಂತಾದ ಸ್ಥಳಗಳಲ್ಲಿ ಪ್ರತಿಬಿಂಬಿಸಿ ಅನೇಕವಾಗಿ ಕಾಣಿಸುವನೋ, ಹಾಗೆಯೇ ಪರಮಾತ್ಮನು ಬ್ರಹ್ಮನಿಂದ ಆರಂಭಿಸಿ ಕ್ರಿಮಿಕೀಟಾದಿಗಳ ಶರೀರಗಳಲ್ಲಿ (ಶರೀರದೊಳಗಿನ ಅಂತಃಕರಣಗಳಲ್ಲಿ) ಪ್ರತಿಬಿಂಬಿಸಿ ಅನೇಕ ಆತ್ಮರೂಪದಲ್ಲಿ ಕಾಣಿಸಿಕೊಳ್ಳುವನು.

ಹೀಗೆ ಪ್ರತಿಬಿಂಬವಾಗಿ ಕಾಣಿಸಿಕೊಳ್ಳುವಾಗ ಅಹಂ ಅಹಂ ಎಂದು ಜೀವರೂಪದಲ್ಲಿ ಅಂತಃಕರಣದ ಧರ್ಮವಾದ ಕರ್ತೃತ್ವ, ಭೋಕ್ತೃತ್ವ ರಾಗದ್ವೇಷಾದಿ ದೋಷಗಳಿಂದಲೂ ಪಾಪಪುಣ್ಯಗಳಿಂದಲೂ ಕೂಡಿರುವಂತೆ ತೋರಿಬರುವನು. ಆದರೂ ಆಕಾಶದಲ್ಲಿರುವ ಸೂರ್ಯಬಿಂಬವು ಶುದ್ಧವಾಗಿಯೇ ಇರುವಂತೆ ಬಿಂಬಸ್ಥಾನದಲ್ಲಿರುವ ಪರಮಾತ್ಮನು ಪ್ರತಿಬಿಂಬ ಜೀವಿಗಳ ಸಂಸಾರದ ಮಾಲಿನ್ಯ ಕಶ್ಮಲಗಳಿಂದ ಸಂಪರ್ಕಿಸದೆ ಶುದ್ಧನಾಗಿಯೇ ಯಾವಾಗಲೂ ಇರುತ್ತಾನೆ ಎಂಬುವುದನ್ನು ಸೂರ್ಯನ ಬಿಂಬ ಪ್ರತಿಬಿಂಬ ದೃಷ್ಟಾಂತದಿಂದ ಅರಿಯಬೇಕು.

ಸೂರ್ಯನಲ್ಲಿ ಇಲ್ಲದ ದೋಷಗಳೂ, ಸೂರ್ಯಪ್ರತಿಬಿಂಬಗಳಲ್ಲಿ ಚಲನವಲನಗಳೂ, ಅನೇಕ ಭೇದಗಳೂ ನಮಗೆ ಕಾಣಿಸಿಕೊಂಡರೂ

ಬಿಂಬಕ್ಕೆ ಯಾವ ದೋಷವೂ ಸಲ್ಲದು ಎಂಬುವಂತೆ ಪರಮಾತ್ಮನಿಗೆ ... ವೆಂದು ಅರಿಯಬೇಕು.

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ**
**ನಲಿಪ್ಯತೇ ಚಾಕ್ಷುಷೈರ್ಬಾಹ್ಯ ದೋಷೈಃ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ**
**ಲೋಕ ದುಃಖೇನ ಬಾಹ್ಯಃ ॥**

ಎಂದು ಕಠವಲ್ಲಿಯ ಮಂತ್ರದಲ್ಲಿ ಈ ಅರ್ಥವು ಸ್ಪಷ್ಟಪಡಿಸಿದೆ.

**ಯಥಾಹ್ಯಯಂ ಜ್ಯೋತಿರಾತ್ಮಾ ವಿವಸ್ವಾನಪೋ**
**ಭಿನ್ನಾ ಬಹುಧೈ ಕೋಽನುಗಚ್ಛನ್ ।**
**ಉಪಾಧಿನಾಕ್ರಿಯತೇ ಭೇದರೂಪಃ ದೇವಃ**
**ಕ್ಷೇತ್ರೇಷ್ವೇವ ಮಜೋಽಯ ಮಾತ್ಮಾ ॥**

ಈ ಮಂತ್ರದಲ್ಲಿ ಬಿಂಬ ಪ್ರತಿಬಿಂಬಗಳಂತೆ ಜೀವ ಪರಮಾತ್ಮರನ್ನು ವರ್ಣಿಸಿರುವುದು

## 2. ಅಗ್ನಿದೃಷ್ಟಾಂತ

ಒಬ್ಬ ಪರಮಾತ್ಮನು ಉಪಾಧಿಗಳಲ್ಲಿ (ಸ್ಥಾನಗಳಲ್ಲಿ) ಬೇರ್ಪಟ್ಟು ತೋರುವನು ಎಂಬುವದಕ್ಕೆ ಅಗ್ನಿದೃಷ್ಟಾಂತವನ್ನು ಕೊಟ್ಟಿದೆ.

**ಅಗ್ನಿರ್ಯಥೈ ಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ**
**ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವ ಭೂತಾಂತರಾತ್ಮಾ ರೂಪಂರೂಪಂ :**
**ಪ್ರತಿರೂಪೋ ಬಹಿಶ್ಚ ॥**

ಹೇಗೆ ಒಂದೇ ಬೆಂಕಿಯು ಈ ಲೋಕದಲ್ಲಿ ಅನೇಕ ಸ್ಥಳಗಳಲ್ಲಿ ಪ್ರತ್ಯೇಕವಾಗಿಯೇ ತೋರಿಬರುವುದೋ, ಹಾಗೆಯೇ ಪರಮಾತ್ಮನು ಸಮಸ್ತ ಪ್ರಾಣಿಗಳ ಅಂತರಾತ್ಮನಾಗಿದ್ದು ಒಬ್ಬನಾದರೂ ಅನೇಕ ಶರೀರಗಳಲ್ಲಿ

ಕಾಣಿಸಿಕೊಳ್ಳುತ್ತಾ ಭಿನ್ನ್ನನಿರುವಂತೆ ಕಾಣುವನು. ನಿಜವಾಗಿ ಅನೇಕವಾಗಿರುವುದಿಲ್ಲ. ಅಶುದ್ಧನೂ ಆಗುವುದಿಲ್ಲ. ಸದಾ ಶುದ್ಧನೇ ಆಗಿರುವನು.

ಬೆಂಕಿಯು ಕಟ್ಟಿಗೆ ಮೇಲೂ, ಕಬ್ಬಿಣದ ಮೇಲೂ, ವಿದ್ಯುತ್ತಿನ ತಂತಿಗಳ ಮೇಲೂ ಹೊತ್ತಿಕೊಂಡು ಉರಿಯುವುದು. ಆದರೆ ಬೆಂಕಿಯೆಂಬ ತತ್ವ ಒಂದೇ. ಸುಡುವ ಸ್ವಭಾವ, ಪ್ರಕಾಶ ಸ್ವಭಾವ, ಲಕ್ಷಣಗಳು ಒಂದೇ ಆಗಿರುವಾಗ ಅಗ್ನಿ ತತ್ವವು ಸ್ಥಾನ ಭೇದವಿದ್ದರೂ ಆದರಿಂದ ಬೇರ್ಪಡುವುದಿಲ್ಲ. ಅದರಂತೆ ಆತ್ಮ ತತ್ವವೆಂದು ಅರಿಯಬೇಕು. ಅಲ್ಲದೆ ಆಕಾಶದಂತೆ ಸ್ವಲ್ಪವೂ ವಿಕಾರಗೊಳ್ಳದೆ ಎಲ್ಲಿದ್ದರೂ ಆತ್ಮನು ಸ್ವರೂಪದಲ್ಲಿ ಬದಲಾಗದೆ ಇರುವುದೆಂಬ ಅಭಿಪ್ರಾಯವನ್ನು ಇಲ್ಲಿಟ್ಟುಕೊಳ್ಳಬೇಕು.

3. ಸ್ವಯಂ ಪ್ರಕಾಶನು ಪರಮಾತ್ಮ ಎಂಬುದಕ್ಕೂ **ಸೂರ್ಯನ ಉಪಮಾನ ಆಗಬಹುದು.** ಸೂರ್ಯನು ತನಗೆ ತಾನೇ ಪ್ರಕಾಶಿಸುತ್ತಾ, ತಾನು ಇನ್ನೊಂದು ಜ್ಯೋತಿಯಿಂದ ಪ್ರಕಾಶಿಸದೆ ಪ್ರಪಂಚಕ್ಕೆ ಪ್ರಕಾಶವುಂಟುಮಾಡುತ್ತಿರುವನು. ಸೂರ್ಯನಂತೆ ಪರಮಾತ್ಮನು ಸ್ವಯಂ ನಿತ್ಯಜ್ಞಾನ ರೂಪದಲ್ಲಿ ಸದಾ ಪ್ರಕಾಶಿಸುತ್ತಾ ಇನ್ನೊಂದರಿಂದ ತಾನು ಪ್ರಕಾಶಿಸದೆ ಇರುವನು. ಅಲ್ಲದೆ ಜಡ ಪ್ರಪಂಚಕ್ಕೆ ಜ್ಞಾನ ಪ್ರಕಾಶವನ್ನುಂಟು ಮಾಡುತ್ತಲಿರುವನು.

ಇದರಿಂದ ಇವನು ಸ್ವಯಂ ಪ್ರಕಾಶ, ಸ್ವಯಂ ಜ್ಯೋತಿಯೆಂದು ಹೇಳಲ್ಪಡುವನು. ಇದಕ್ಕೆ ಸೂರ್ಯನು ದೃಷ್ಟಾಂತವೆಂದು ಅರಿಯಬೇಕು.

## 4. ಅಗ್ನಿಯ ದೃಷ್ಟಾಂತವು ಮತ್ತು ಅದರ ಕಿಡಿಗಳ ದೃಷ್ಟಾಂತವು.

ಪರಮಾತ್ಮನು ಬೆಂಕಿಯಂತೆ ಇರುವನು. ಬೆಂಕಿಯಿಂದ ಕಿಡಿಗಳು ಹಾರುವಂತೆ (ಹುಟ್ಟುವಂತೆ) ಜೀವರು ಪರಮಾತ್ಮನಿಂದ ಹುಟ್ಟಿರುವರು

ಇಲ್ಲಿ ಬೆಂಕಿಗೂ ಅದರ ಕಿಡಿಗಳಿಗೂ ಯಾವ ರೀತಿಯಲ್ಲಿ ಭೇದವಿರುವುದಿಲ್ಲವೋ ಹಾಗೆಯೇ ಪರಮಾತ್ಮನಿಗೂ ಜೀವರಿಗೂ ಸ್ವರೂಪ ಚೈತನ್ಯದಲ್ಲಿ ಭೇದವಿರುವುದಿಲ್ಲ. ಬೆಂಕಿಯು ಹೇಗೆ ಸುಡುವುದೋ ಹಾಗೆ ಕಿಡಿಯೂ ಸುಡುವುದು. ಆದರಿಂದ ಬೆಂಕಿಯೆಂಬುದೂ ಕಿಡಿಯೆಂಬುದೂ ಸಹ ಒಂದೇ. ಬೇರೆಯಾಗಿ ಕಾಣುವುದು. ಇದ್ದಲಿನ ಚೂರುಗಳು ಬೇರೆಯಾದ್ದರಿಂದ; ಅದರಲ್ಲಿ ಹೊತ್ತಿದ ಬೆಂಕಿಯೂ ಬಿಡಿ ಬಿಡಿಯಾಗಿ ಸಣ್ಣದಾಗಿ ಕಾಣುವುದು. ಹಾಗೆಯೇ ನಿತ್ಯಚೈತನ್ಯರೂಪನಾದ ಆತ್ಮನಿಗೂ ಜೀವಾತ್ಮರಿಗೂ ಸ್ವರೂಪದಲ್ಲಿ ಭೇದವಿಲ್ಲ. ಶರೀರೇಂದ್ರಿಯಗಳ ಭೇದದಿಂದ ಬೇರೆಯಾಗಿ ಹುಟ್ಟಿದಂತೆ ತೋರುವುದು ಎಂದು ಅಗ್ನಿ ಕಿಡಿ ದೃಷ್ಟಾಂತಗಳಿಂದ ತಿಳಿಯಬೇಕಾದ ಅಂಶವು.

**ಮುಂಡಕ– ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ**
**ಸಹಸ್ರಶಃ ಪ್ರಭವನ್ತೇ ಸರೂಪಾಃ ।**
**ತಥಾಕ್ಷ ದ್ವಿವಿಧಾಃ ಸೌಮ್ಯ ಭಾವಾಃ**
**ಪ್ರಜಾಯನ್ತೇ ತತ್ರಚೈವಾಪಿಯನ್ತಿ ॥**

ಎಂದು ಈ ಉದಾಹರಣೆಯನ್ನು ಕೊಟ್ಟಿದೆ.

5. ಒಂದೇ ತತ್ವವು ಅನೇಕ ರೂಪವನ್ನು ಹೊಂದಿದೆಯೆಂಬುದಕ್ಕೆ **ವಾಯು ದೃಷ್ಟಾಂತ** (ಉಪನ್ಯಾಸ)

ವಾಯುವು ಒಂದೇ ಆಗಿದ್ದರೂ ಲೋಕದಲ್ಲಿ ಪ್ರವೇಶಿಸಿದ ನಂತರ ಸ್ಥಾನಭೇದದಿಂದ ಭೂಮಿ, ಆಕಾಶ, ಅಂತರಿಕ್ಷಗಳಲ್ಲಿ ಬೀಸುತ್ತಾ ಬಗೆ ಬಗೆಯಾಗಿರುವಂತೆ ಕಾಣುವುದು. ಹಾಗೂ ಇದೇ ವಾಯು ಜೀವ ಶರೀರಗಳಲ್ಲಿ ಪ್ರವೇಶಿಸಿ ಪ್ರಾಣಾಪಾನಾದಿ ನಾನಾ ರೂಪವಾಗಿ ಕಾಣಿಸಿಕೊಳ್ಳುವುದು. ಹಾಗೆಯೇ ಪರಮಾತ್ಮನು ಒಬ್ಬನಾದರೂ ನಾನಾ ಶರೀರಗಳಲ್ಲಿ ಅಹಂ ಅಹಂ ಎಂದು ಪ್ರತ್ಯೇಕಿಸಿ ಭಿನ್ನವಾಗಿ ತೋರಿಬರುವನು. ನಿಜವಾಗಿಯೂ ಜೀವರ ಸ್ವರೂಪ ಪರಮಾತ್ಮನಿಗೆ ಬೇರ್ಪಟ್ಟಿಲ್ಲ. ತೋರಿಕೆಯಲ್ಲಿ ಮಾತ್ರ ಭೇದವೆಂದು ಅಭಿಪ್ರಾಯವು.

## 6. ಊರ್ಣನಾಭಿ ದೃಷ್ಟಾಂತ

ಪರಬ್ರಹ್ಮವೇ ಸೃಷ್ಟಿಗೆ ಉಪಾದಾನ ಕಾರಣ ಮತ್ತು ನಿಮಿತ್ತ ಕಾರಣವೆಂಬುದಕ್ಕೆ ಮತ್ತು ಚೇತನದಿಂದ ಅಚೇತನವು ಹುಟ್ಟುವುದೆಂಬುದಕ್ಕೆ **ಊರ್ಣನಾಭಿ** ದೃಷ್ಟಾಂತ. **ಊರ್ಣನಾಭಿ**ಯೆಂದರೆ ಜಾಡರ ಹುಳ, ಅದು ಬಲೆಯನ್ನು ಸೃಷ್ಟಿಸುವುದು ಮತ್ತು ಒಳಗೆ ಎಳೆದುಕೊಳ್ಳುವುದು. ಅದರಂತೆ ಪರಬ್ರಹ್ಮವು ಈ ಜಗತ್ತನ್ನು ಸೃಷ್ಟಿಸಿ ಸಂಹಾರ ಕಾಲದಲ್ಲಿ ತನ್ನೊಳಗೆ ಸೇರಿಸಿಕೊಳ್ಳುವುದು. ಚೇತನವಾದ ಜಾಡರಹುಳದಿಂದ ಅಚೇತನವಾದ ಬಲೆಯು ಹೇಗೋ ಹಾಗೆಯೇ ಚೇತನವಾದ ಬ್ರಹ್ಮದಿಂದ ಅಚೇತನವಾದ ಪಂಚಭೂತಗಳು ಹುಟ್ಟಿದುವು.

## 7. ಹಾಗೆಯೇ **ಪೃಥಿವೀ ದೃಷ್ಟಾಂತ**

ಭೂಮಿಯಲ್ಲಿ ಔಷಧಿ ವನಸ್ಪತಿಗಳು ಹುಟ್ಟುವುವು. ಅಲ್ಲಿಯೇ ಮಡಿಯುವುವು. ಅವುಗಳಿಗೆ ಪೃಥಿವಿಯು ಉಪಾದಾನ ಕಾರಣ, ಮೃತ್ತಿಕೆಯು ಗಡಿಗೆಗೆ ಕಾರಣವಾಗಿರುವಂತೆ

8. ಹಾಗೆಯೇ ಜೀವಂತನಾದ ಮನುಷ್ಯ ಚೇತನದಿಂದ, ಕೇಶ ರೋಮಗಳು (ಅಚೇತನವು) ಹುಟ್ಟುವಂತೆ ಬ್ರಹ್ಮದಿಂದ ಅಚೇತನವೂ ಹುಟ್ಟುವುದು. ಈ ವಿಷಯವನ್ನು ಅರಿಯಲು ಈ ದೃಷ್ಟಾಂತಗಳು ಮುಂಡಕದಲ್ಲಿ ಕೊಡಲ್ಪಟ್ಟಿವೆ.

**ಯಥೋರ್ಣನಾಭಿಃ ಸೃಜತೇಗೃಣ್ಣತೇಚ**
**ಯಥಾಪೃಥಿವ್ಯಾಮೋಷಧಯಃ ಸಂಭವನ್ತಿ**
**ಯಥಾಸತಃಪುರುಷಾತ್ ಕೇಶಲೋಮಾನಿ**
**ತಥಾಕ್ಷರಾತ್ ಸಂಭವತೀಹ ವಿಶ್ವಮ್||**

## ೪. **ಆಕಾಶ ಘಟಾಕಾಶ** ದೃಷ್ಟಾಂತಗಳು

ಹೇಗೆ ಆಕಾಶವು ಘಟಾಕಾಶರೂಪದಲ್ಲಿ ಹುಟ್ಟುವುದೋ ಹಾಗೆಯೇ ಆತ್ಮನು (ವ್ಯಾಪಕನಾದರೂ) ಜೀವರೂಪದಿಂದ ಹುಟ್ಟುವನು. (ಹುಟ್ಟಿದಂತೆ ತೋರುವನು.) ಘಟಾಕಾಶವು ಹುಟ್ಟಲು ಘಟವೇ ಕಾರಣ. ಅಂದರಂತೆಯೇ ಈ ಜೀವಾತ್ಮನು ಹುಟ್ಟಲು ದೇಹ, ಇಂದ್ರಿಯ, ಬುದ್ಧಿ, ಮನಸ್ಸು ಇತ್ಯಾದಿ ಉಪಾಧಿಗಳು ಕಾರಣ. ನಿಜವಾಗಿ ಆತ್ಮನು ಹುಟ್ಟದವನು. ಮಹಾಕಾಶದಂತೆ **"ಆಕಾಶವತ್ ಸರ್ವ ಗತಶ್ಚ ನಿತ್ಯಃ"** ಎಂದಂತೆ ಆತ್ಮನು ನಿತ್ಯನು. ಘಟ ಸಂಬಂಧವಾದಾಗ ಘಟಾಕಾಶವು ಹುಟ್ಟಿದಂತಾಗುವುದು. ಹಾಗೆಯೇ ಶರೀರಾದಿಗಳು ಹುಟ್ಟಿ ಅವರ ಸಂಬಂಧವುಂಟಾದಾಗ ಆತ್ಮನು ಹುಟ್ಟಿದಂತೆ ಭಾಸವಾಗುವನು. ಮಹಾಕಾಶದಂತೆ ಸ್ವತಃ ತಾನಾಗಿ ಹುಟ್ಟುವುದಿಲ್ಲ. ನಶಿಸುವುದೂ ಇಲ್ಲ. ಘಟವು ಒಡೆದುಹೋದರೆ ಘಟಾಕಾಶ (ಗಡಿಗೆಯೊಳಗಿನ ಛಿದ್ರವು) ನಾಶವಾಗುವುದು. ಅಂದರೆ ಘಟಾಕಾಶವು ಮಹಾಕಾಶದಲ್ಲಿ ಲೀನವಾಗುವುದು. ಹಾಗೆ ತೋರುವುದು) ಅದರಂತೆ ಶರೀರ ನಾಶವಾದರೆ ನಾಶವಾಗುವನು. (ನಾಶವಾದಂತೆ ತೋರುವನು.) ಮತ್ತು ಘಟವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ದರೆ ಘಟಾಕಾಶವೂ ಒಯ್ದಂತೆ ಆಗುವುದಷ್ಟೆ. ಹಾಗೆಯೇ ಶರೀರವು ಒಂದು ಕಡೆಯಿಂದ ಮತ್ತೊಂದು ಕಡೆಗೆ ನಡೆದರೆ ಅವರೊಂದಿಗೆ ಇರುವ ಆತ್ಮನೂ ಹೋಗುವನು. (ಹೋದಂತೆ ತೋರುವನು) ಹೀಗೆಯೇ ಎಂದಿಗೂ ಚಲಿಸದ ಆತ್ಮನು ಸೂಕ್ಷ್ಮ ಶರೀರವಾದ ಮನಸ್ಸು ಬುದ್ಧಿ ಇತ್ಯಾದಿಗಳು ಈ ಶರೀರವನ್ನು ಬಿಟ್ಟು ಬೇರೆಕಡೆಗೆ ಸಂಚರಿಸಿದರೆ ಆತ್ಮನೂ ಅದರೊಂದಿಗೆ ಸಂಚರಿಸಿ ಲೋಕಾಂತರಕ್ಕೆ ಹೋಗುವನು. ಸ್ವರ್ಗ ನರಕಾದಿಲೋಕಗಳಿಗೆ ನೇರಾ ಆತ್ಮನೂ ಸಂಚರಿಸುವುದಿಲ್ಲ. ಆತ್ಮನ ಸೂಕ್ಷ್ಮ ಶರೀರವು ಎಲ್ಲೆಲ್ಲಿ ಹೋಗುವುದೋ ಅಲ್ಲಿಗೆ ಈತನೂ ತೆರಳುವನು. ಕುದುರೆ ಹೋದಲ್ಲಿ ಸವಾರನೂ ಹೋದಂತೆ. ಸ್ವತಃ ತಾನು ಚಲಿಸದೆ ಸ್ಥಿರವಾಗಿ ವ್ಯಾಪಕನಾಗಿಯೇ ಇರುವನು.

**ಘಟಸಂವೃತ ಮಾಕಾಶಂ ನೀಯಮಾನೇ ಘಟೇ ಯಥಾ |**
**ಘಟೋ ನೀಯೇತ ನಾಕಾಶಂ |**
**ತದ್ವಜ್ಜೀವೋ ನಭೋಪಮಃ ||** (ಉಪನಿಷತ್ತು. ತಾ. ಉ.)

ಅಲ್ಲದೆ ಘಟಾದಿಗಳು ಧ್ವಂಸವಾಗಿ ಲಯ ವಾದರೆ ಘಟಾಕಾಶಾದಿಗಳು ಮಹಾಕಾಶದಲ್ಲಿ ಲೀನವಾಗುತ್ತವೆ. ಅದರಂತೆ ಶರೀರವು ಲಯ ವಾದರೆ ಶರೀರದಿಂದ ಕೂಡಿದ ಆತ್ಮನು (ಜೀವನ) ಪರಮಾತ್ಮನಲ್ಲಿ ಲಯ ವಾಗುವನು ಏಕವಾಗುವನು.

10. **ಘಟಾಕಾಶದ ಉದಾಹರಣೆಯ** ಸ್ವಾರಸ್ಯವು ಇನ್ನೊಂದು ಇದೆ. ಒಂದು ಘಟಾಕಾಶದಲ್ಲಿ (ಗಡಿಗೆಯೊಳಗೆ) ಮಣ್ಣು, ಧೂಳು, ಹೊಗೆ ಮುಂತಾದುವು ಇದ್ದರೆ ಇತರ ಘಟಾಕಾಶಗಳಲ್ಲಿ ಅವು ಸೇರುವುದಿಲ್ಲ. ಆದರಂತೆ ಒಬ್ಬ ಜೀವನಿಗೆ ತನ್ನ ಪಾಪಪುಣ್ಯಗಳ ಫಲವು ಸುಖ ದುಃಖ ಗಳು ಅನುಭವಕ್ಕೆ ಬಂದರೆ ಮತ್ತೊಬ್ಬ ಜೀವನಿಗೆ ಆ ಸುಖದುಃಖಗಳು ಬಂದು ಸೇರುವುದಿಲ್ಲ. ಆಯಾಯಾ ಜೀವರಲ್ಲೇ ಅವರವರ ಪಾಪಪುಣ್ಯಗಳೂ ಅದರ ಫಲಗಳೂ ಸೇರುವುವು. ಇದೊಂದು ವ್ಯವಸ್ಥೆಯೂ ಇದೆ ಯೆಂಬುದು ಈ ಉದಾಹರಣೆಯಿಂದ ತಿಳಿದು ಬರುವುದು. ಇದಕ್ಕೆ ಕಾರಣ ಅವರವರ ಅಜ್ಞಾನ, ಕಾಮ, ಕರ್ಮಗಳು, ಶರೀರೇಂದ್ರಿಯಗಳು ಬೇರೆಯಾಗಿರುವುದೇ. ಮತ್ತು ಘಟ, ಕಮಂಡಲು, ಮಡಿಕೆ, ಕುಡಿಕೆ ಇತ್ಯಾದಿಗಳು ಮಣ್ಣಿನಿಂದ ಮಾಡಲ್ಪಟ್ಟವುಗಳಲ್ಲಿ, ಆಕಾರ, ರೂಪ, ಹೆಸರು, ಕಾರ್ಯ ಇವುಗಳು ಎಲ್ಲವೂ ಪ್ರತ್ಯೇಕವಾಗಿ ಇರುವುವು. ಮಣ್ಣಿನ ಗಡಿಗೆ, ಮಡಿಕೆ, ಕುಡಿಕೆ ಇತ್ಯಾದಿ ಹೆಸರುಗಳೂ ಅವುಗಳ ಆಕಾರಗಳೂ ಬೇರೆ ಬೇರೆ. ಅವುಗಳ ಕಾರ್ಯವೆಂದರೆ ನೀರು ಸೇದಿ ತರುವುದು, ತುಂಬಿಡುವುದು, ಅನ್ನ ಬೇಯಿಸುವುದು ಇತ್ಯಾದಿ ಕೆಲಸಗಳು ಆಯಾಯ ಪಾತ್ರೆಗಳಲ್ಲೇ ಇರುತ್ತವೆಂಬಷ್ಟೆ. ಆದರೆ ಅವೆಲ್ಲಾ ಪಾತ್ರೆಗಳಲ್ಲೂ ಇರುವ ಆಕಾಶಕ್ಕೆ ಭೇದವಿರುವುದಿಲ್ಲ. ಅದರಂತೆ ಜೀವರಲ್ಲೂ ಶುದ್ಧ ಸ್ವರೂಪವಾದ ಆತ್ಮನ ಭೇದವಿರುವುದಿಲ್ಲ.

ಶರೀರದ ಆಕಾರ, ಹೆಸರು, ಅದರ ಕಾರ್ಯಗಳೂ* ಸಹ ಬೇರೆಯಾಗಿಯೇ ಇದ್ದರೂ, ಆತ್ಮಸ್ವರೂಪದಲ್ಲಿ ಭೇದವಿರುವುದಿಲ್ಲವೆಂದು ಆಕಾಶದ ಉದಾಹರಣೆಯಿಂದ ಅರಿಯಬೇಕು.

**ಆತ್ಮಾಹ್ಯಾಕಾಶವಜ್ಜೀವೈಃ ಘಟಾಕಾಶೈರಿವೋದಿತಃ**
**ಘಟಾದಿವಚ್ಚ ಸಂಘಾತೈಃ ಜಾತಾವೇತನ್ನಿದರ್ಶನಂ ||4||**
**ಘಟಾದಿಷು ಪ್ರಲೀನೇಷು ಘಟಾಕಾಶಾದಯೋ ಯಥಾ**
**ಆಕಾಶೇ ಸಂಪ್ರಲೀಯನ್ತೇ ತದ್ವಜ್ಜೀವಾ ಇಹಾತ್ಮನಿ ||5||**
**ಯಥೈಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿರ್ಯುತೇ**
**ನ ಸರ್ವೇಸಂಪ್ರಯುಜ್ಯನ್ತೇ ತದ್ವಜ್ಜೀವಾಃ ಸುಖಾದಿಭಿಃ ||6||**
**ರೂಪಕಾರ್ಯಸಮಾಖ್ಯಾಶ್ಚಭಿದ್ಯನ್ತೆ ತತ್ರ ತತ್ರವೈ**
**ಆಕಾಶಸ್ಯ ನ ಭೇದೋಽಸ್ತಿ ತದ್ವಜ್ಜೀವೇಷು ನಿರ್ಣಯಃ ||7||**

(ಮಾಂ-ಕಾ 3.4-7)

13 ಆತ್ಮನು ಸ್ವತಃ ಸ್ವರೂಪದಲ್ಲಿ ನಿತ್ಯಶುದ್ಧನು, ನಿರ್ವಿಕಾರನು ಅವಯವರಹಿತನು. ಜನನ, ಮರಣ, ಗಮನ, ಆಗಮನ, ಬಾಲ್ಯ ಕೌಮಾರ, ತಾರುಣ್ಯ, ವಾರ್ಧಕಾವಸ್ಥೆಗಳುಳ್ಳ ಸಮಸ್ತಶರೀರಗಳಲ್ಲೂ ಸಹ ಸ್ವತಃ ವಿಕಾರರಹಿತನು ಎಂಬುದಕ್ಕೆ **ಆಕಾಶವೇ ಉದಾಹರಣೆ.**

ಮಹಾಕಾಶಕ್ಕೆ ಘಟಾಕಾಶವು ವಿಕಾರವಲ್ಲ (ಪರಿಣಾಮವಲ್ಲ) ಅವಯವವೂ ಅಲ್ಲ, ಎಂಬಂತೆ ಜೀವಾತ್ಮನು ಪರಮಾತ್ಮನ ವಿಕಾರವಲ್ಲ ಅವಯವವೂ (ಭಾಗವೂ) ಅಲ್ಲ, ಅರಿಯದ ಅಜ್ಞರು ಆಕಾಶವು ಕಪ್ಪಾಗಿದೆ ಕೆಂಪಾಗಿದೆಯೆಂದು ಭ್ರಾಂತಿಯಿಂದ ತಿಳಿದರೂ ನಿಜವಾಗಿ ಆಕಾಶವನ್ನು ಹತ್ತಿರದಲ್ಲಿ ಹೋಗಿ ನೋಡಿದಾಗ ಅದು ಯಾವ ಬಣ್ಣವೂ ಇಲ್ಲದೆ

* ಶರೀರದ ಆಕಾರ-ಮನುಷ್ಯ, ಪಶು, ಪಕ್ಷಿ ಮುಂತಾದವುಗಳ ಆಕಾರ, ಹೆಸರು ಮನುಷ್ಯರಲ್ಲಿ ರಾಮು, ಲಕ್ಷ್ಮಣ, ಸುಬ್ರಹ್ಮಣ್ಯ ಇತ್ಯಾದಿ. ಪಶುಗಳಿಗೆ- ಹಸು, ಆಡು, ಕುರಿ. ಪಕ್ಷಿಗಳಲ್ಲಿ ಗರುಡ, ಗಿಡುಗ, ಪಾರಿವಾಳ, ಕಾಗೆ, ಇತ್ಯಾದಿಗಳು, ಕಾರ್ಯಗಳು ಅವರವರ ಕೆಲಸಗಳು ಎಂದು ಅರಿಯಬೇಕು.

ನಿರ್ಮಲನಾಗಿಯೇ ಇರುವುದು. ಅದರಂತೆ ಆತ್ಮನು, ಅಜ್ಞರ ಕಲ್ಪನೆಯಿಂದ, ಅಂತಃಕರಣದ, ದೋಷಗಳಿಂದ, ಅಜ್ಞಾನಿಯಾಗಿಯೂ, ರಾಗದ್ವೇಷಾದಿದೋಷಗಳಿಂದ ಕೂಡಿಯೂ ಇರುವಂತೆ ತೋರಿಬರುವನು. ಜ್ಞಾನವು ಆತ್ಮನಲ್ಲೇ ಉಂಟಾದರೆ ಜ್ಞಾನಿಗಳಿಗೆ ನಿತ್ಯ ನಿರ್ಮಲನಾಗಿಯೇ ಕಾಣಿಸುವನು.

ಹಾಗೆಯೇ ಜೀವರ ಉಪಾಧಿಗಳು ಶರೀರೇಂದ್ರಿಯಾದಿಗಳೂ ಸಹ ಸ್ವಪ್ನದಲ್ಲಿ ತೋರುವಂತೆ ಆತ್ಮನ ಮಾಯೆಯೆಂಬುವ ಅವಿದ್ಯೆಯಿಂದ ಸೃಷ್ಟಿಯಾಗಿರುವುವು (ಕಲ್ಪಿತವು), ನಿಜವಲ್ಲ. ಹೀಗೆ ಉಪಾಧಿಗಳೇ ಕಲ್ಪಿತವಾಗಿರುವಾಗ ಅವುಗಳ ಶ್ರೇಷ್ಠತೆಯಿಂದ ಶ್ರೇಷ್ಠನೆಂದಾಗಲೀ, ನೀಚತೆಯಿಂದ ನೀಚನೆಂದಾಗಲೀ, ಸಮತೆಯಿಂದ ಸಮಾನನೆಂದಾಗಲೀ ಆತ್ಮನನ್ನು ನಿಜವಾಗಿ ತಿಳಿಯಲಾಗದು. (ಮಾಂ||-೩-೧೦)

ಆ ಬಗ್ಗೆ ಯಾವ ಯುಕ್ತಿಯನ್ನೂ ಉಪಯೋಗಿಸಲು ಶಕ್ಯವಲ್ಲ.

**ಸಂಘಾತಾಃ ಸ್ವಪ್ನವತ್ ಸರ್ವೇ ಆತ್ಮ ಮಾಯಾ ವಿಸರ್ಜಿತಾಃ**
**ಆಧಿಕ್ಯೇ ಸರ್ವ ಸಾಮ್ಯೇವಾ ನೋಪಪತ್ತಿರ್ಹಿವಿದ್ಯತೇ ||೧||**

13. ಹೀಗೆಯೇ-ಘಟಾಕಾಶ-ಮಹಾಕಾಶಗಳಿಗೆ ಹೇಗೆ ಐಕ್ಯವಿರುವುದೋ ಹಾಗೆ ಪೃಥಿವಿ, ಜಲ ಮುಂತಾದ ಬಾಹ್ಯ ಸ್ಥಾನಗಳಲ್ಲೂ ಶರೀರದ ಒಳಗೂ ಜೀವರಿಗೆ ಪರಬ್ರಹ್ಮ (ಪರಮಾತ್ಮ) ಎಂಬುವ ಸ್ವರೂಪವು ಒಂದೇ ಆಗಿರುವುದು. ಸ್ಥಾನಭೇದದಿಂದ ಭೇದವಿರದೆ ಐಕ್ಯವೇ ಇರುವುದೆಂದೂ ಈ ಉದಾಹರಣೆಯಿಂದ ತಿಳಿಯಬೇಕಾದುದು.

(ಮಾಂ||-೩-೧೨)

14. ಆತ್ಮನು ಸದಾ ನಿರ್ಲಿಪ್ತನು ಎಂಬುವುದಕ್ಕೆ **ಸ್ಫಟಿಕ ದೃಷ್ಟಾಂತ**. ಸ್ಫಟಿಕವು ಕೆಂಪು ದಾಸವಾಳದ ಹೂವಿನೊಂದಿಗೆ ಇರುವಾಗ ಕೆಂಪಾಗಿ ಕಾಣಿಸುವುದು. ಅದು ನಿಜವಾಗಿ ನೋಡು

ವಾಗಲೂ ಕೆಂಪಾಗಿರುವುದಿಲ್ಲ. ಹೂವನ್ನು ಬೇರ್ಪಡಿಸಿದಾಗ ಶುಭ್ರವಾಗಿಯೇ ಇರುವುದು, ಕಾಣುವುದು. ಹಾಗೆಯೇ ಆತ್ಮನು ಸಂಸಾರ ದಶೆಯಲ್ಲೂ ಶುದ್ಧನಾಗಿಯೇ ಇರುವನು. ಅಂತಃಕರಣದ ದೋಷದಿಂದ ಅಜ್ಞಾನಿಯಾಗಿಯೂ, ರಾಗದ್ವೇಷಾದಿ ದೋಷಗಳಿಂದ ದೋಷಿಯಾಗಿ ಕಾಣುವನು. ಈ ರೀತಿ ಸಂಸಾರದ ದೋಷಗಳು ಕಾಣುವುದೂ ನಿಜವಾಗಿಲ್ಲ, ಭ್ರಮೆ ಮಾತ್ರ. ತತ್ವಜ್ಞಾನವಾದರೆ- ಶರೀರೇಂದ್ರಿಯಾದಿಗಳಿಂದ ಬೇರ್ಪಟ್ಟೇ ಕಾಣುವನು. ಹೀಗೆ ಯಾವಾಗಲೂ ನಿರ್ಮಲ ಸಚ್ಚಿದಾನಂದರೂಪನೆಂದು ಈ ಉದಾಹರಣೆಯಿಂದ ಅರಿಯಬೇಕು. ಸಂಸಾರವೂ ಜನನ ಮರಣಾದಿಗಳೂ ಸಹ ಆತ್ಮನಿಗೆ ನಿಜವಾಗಿಲ್ಲ. ಕೇವಲ ಅಂತಃಕರಣದಲ್ಲಿ ಆಗುವ ಭ್ರಮೆಯೆಂದು ಇದರಿಂದ ತಿಳಿಯುವುದು.

15. ಜಗತ್ತೆಲ್ಲವೂ ಸತ್ಯವಲ್ಲ ಮಿಥ್ಯೆ. ಸತ್ಯವೆಂದು ತೋರಿಕೆ ಮಾತ್ರ ಎಂಬುದಕ್ಕೆ **ಸ್ವಪ್ನ, ಮಾಯೆ(ಇಂದ್ರಜಾಲ), ಗಂಧರ್ವನಗರ, ಮರುಮರೀಚಿ** ಇತ್ಯಾದಿಗಳನ್ನು ಹೋಲಿಸುವರು.

**ಸ್ವಪ್ನ ಮಾಯೇ ಯಥಾ ದೃಷ್ಟೇ, ಗಂಧರ್ವ ನಗರಂ ಯಥಾ।**
**ತಥಾ ವಿಶ್ವಮಿದಂ ದೃಷ್ಟಂ ವೇದಾಂತೇಷು ವಿಚಕ್ಷಣೈಃ ॥**
(ಗೌ ಕಾ. ೨-೩೨)

(೧) ಸ್ವಪ್ನದಲ್ಲಿ ಕಾಣುವ ಆನೆ, ಕುದುರೆ, ರಥ, ಸ್ತ್ರೀ, ಜನರು ಇತ್ಯಾದಿಗಳು ಶರೀರದೊಳಗೇ ಕಾಣುವುವು. ಇಂದ್ರಿಯಗಳು ವ್ಯಾಪಾರ ಶೂನ್ಯವಾಗಿರುವಾಗ ಎಚ್ಚರದಲ್ಲಿ ಅನುಭವ ಪಡೆದ ವಸ್ತುಗಳು ವಾಸನೆಯಿಂದ (ಸಂಸ್ಕಾರದಿಂದ) ಕೇವಲ ಮನಸ್ಸಿಗೆ ಕಾಣಿಸುವುವು. ಎಚ್ಚರವಾದ ಮೇಲೆ ಆನೆಯೂ ಇಲ್ಲ, ಕುದುರೆಯೂ ಇಲ್ಲ, ರಥವೂ ಇಲ್ಲ. ಕೇವಲ ನೋಡಿದ್ದು ಮಾತ್ರವೆಂದೂ ಸ್ವಪ್ನ ವಸ್ತುಗಳು ಮಿಥ್ಯೆಯೆಂದೇ ಎಲ್ಲರ ಅನುಭವದಲ್ಲಿರುವುದು. ಹಾಗೆಯೇ ಈ ಜಾಗರದ ಪ್ರಪಂಚವು ತತ್ವಜ್ಞಾನಿಗಳಲ್ಲದವರಿಗೆ ಸತ್ಯವಾಗಿರುವಂತೆ, ಜ್ಞಾನವು ಬರುವವರೆಗೂ

ತೋರುವುವು. ಆದರೆ ನಿಜವಾಗಿ ಜ್ಞಾನ ಬಂದ ಮೇಲೆ ಮಿಥ್ಯೆಯಾಗಿ ಬಿಡುವುವು.

16. (೨) **ಮಾಯೆ(ಇಂದ್ರಜಾಲ)**-ಇಂದ್ರಜಾಲದಲ್ಲಿ ಆನೆ, ಮೊಲ, ಮುಂತಾದುವನ್ನು ಮಾಯಾವಿಯು ತೋರಿಸುವನು. ನೋಡುವವರಿಗೆ ಸತ್ಯವಾಗಿ ಕಾಣಿಸುವುವು. ಇಂದ್ರಜಾಲವನ್ನು ಉಪಸಂಹಾರ ಮಾಡಿ ದಂತೆ ಎಲ್ಲವೂ ಸುಳ್ಳೆಂದು ತಿಳಿಯುವುವು. ಶ್ರೀ ಶಂಕರಾಚಾರ್ಯರು ಕೊಟ್ಟ ಉದಾಹರಣೆ ಮತ್ತೊಂದು - ಒಬ್ಬ ಮಾಯಾವಿಯು ಒಂದು ನೂಲೇಣಿಯನ್ನು ಆಕಾಶಕ್ಕೆ ಎಸೆದು, ತಾನೇ ಅದರ ಮೇಲೆ ಏರಿ, ಆಕಾಶ ದಲ್ಲಿ ಖಡ್ಗವನ್ನು ಹಿಡಿದು ಝಳಪಿಸಿ ಪುನಃ ಕೆಳಕ್ಕೆ ಇಳಿಯುವನು. ಇದರಲ್ಲಿ ನಿಜವಾದ ಮಾಯಾವಿ ನೆಲದ ಮೇಲೆ ನಿಂತೇ ಇರುವನು. ನೂಲೇಣಿಯ ಮೇಲೆ ತಾನೇ ಹತ್ತಿದಂತೆ ತೋರಿಸುವ ಮತ್ತೊಂದು ವ್ಯಕ್ತಿಯು ಸತ್ಯವಲ್ಲ. ಹತ್ತಿದ್ದು, ಕೈಯಲ್ಲಿ ಖಡ್ಗ ಹಿಡಿದದ್ದು ಎಲ್ಲವೂ ಸತ್ಯವಲ್ಲವೆಂದು ಈ ಉದಾಹರಣೆಯಲ್ಲಿ ತಿಳಿಯುವುದು. ಅದರಂತೆ ತತ್ವಜ್ಞಾನವಿಲ್ಲದಿರುವಾಗ ಪರಮಾತ್ಮನಲ್ಲಿ ಜೀವರಿಗೆ ಈ ಪ್ರಪಂಚವು ನಿಜವಾಗಿ ಹುಟ್ಟಿ ಸತ್ಯವಾಗಿರುವಂತೆ ತೋರುವುದು.

17. (೩) **ಗಂಧರ್ವನಗರ** - ಎಂದರೆ ಅಪರೂಪವಾಗಿ ಯಾವಾ ಗಲೋ ಒಂದು ಸಲ ಆಕಾಶದಲ್ಲಿ ನಗರವಿದ್ದಂತೆ ತೋರುವುದು. ಪ್ರಾಸಾದಗಳು, ಅಟ್ಟಗಳು, ರಾಜಬೀದಿಗಳು, ಓಡಾಟ ಮಾಡುವ ಜನರು, ಹೀಗೆ ಇರುವಂತೆ ತೋರುತ್ತವೆ. ಇದೇ ಗಂಧರ್ವ ನಗರ. ನಿಜ ವಾಗಿ ಆಕಾಶದಲ್ಲಿ ಇಂತಹ ಸನ್ನಿವೇಶವಿರುವ ನಗರವು ಇಲ್ಲದಿದ್ದರೂ ತೋರುವುದು ಅಪರೂಪ. ತೋರುವುದೇ ಇಲ್ಲವೆಂತಲ್ಲ.

ವಿಧುಶೇಖರ ಭಟ್ಟಾಚಾರ್ಯರು ಆಗಮ ಶಾಸ್ತ್ರದ ಟಿಪ್ಪಣಿಯಲ್ಲಿ ಹೀಗೆ ಹೇಳುವರು. ಗಂಧರ್ವ ನಗರವೆಂಬುದು ಇಲ್ಲವೆಂದಲ್ಲ. ಸರ್ವಥಾ ಹಾಗೆ ತೋರುವುದಿಲ್ಲವೆಂತಲ್ಲ. ಪ್ರಾಸಾದಿಗಳುಇಲ್ಲದಿದರೂ ತೋರುವುವು.

ಯೂರೋಪಿನ ಸಮುದ್ರತೀರಗಳಲ್ಲಿ ನೌಕೆಗಳು ತಲೆಕೆಳಗಾಗಿ ತೋರುತ್ತವೆ. ಅದು ಸರ್ವಸಾಧಾರಣವಾಗಿ ಕಾಣುತ್ತವೆ- ಆದರೆ ಹಾಗೆಯೇ ಪ್ರಾಸಾದಗಳು, ಎತ್ತರವಾದ (ಅಟ್ಟಗಳು) ಅಂಗಡಿಗಳು, ಭೂಭಾಗಗಳೂ ಓಡಾಡುವ ಹಸುಗಳೂ ಇವೂ ಸಹ ಅಲ್ಲಲ್ಲಿ ತೋರುತ್ತವೆ. ಆದರೆ ವಾಸ್ತವವಾಗಿ ಇರುವುದಿಲ್ಲ. ಹೀಗೆಂದು ವಿಜ್ಞಾನಿಗಳೂ ಹೇಳುತ್ತಾರೆ.

**ದಿ ಪ್ಯಾಲೇಸಸ್ ಆಫ್ ಫೇರೀಸ್ (ಪು.649 ಗೌಡಪಾದರ–2–32 ಕಾರಿಕೆಯ ಟೀಕೆ)**

18. **ಮರುಮರೀಚಿಕಾ** – ಎಂದರೆ - ಮರುಭೂಮಿ-ಯಲ್ಲಿ ಮಧ್ಯಾಹ್ನ ಬಿಸಿಲು ಏರಿದಾಗ ದೂರಕ್ಕೆ ಮರಳಲ್ಲಿ ಸೂರ್ಯಕಿರಣಗಳು ಪ್ರಸಾರವಾದಾಗ ಆ ಬಿಸಿಲಿನ ಝಳದಲ್ಲಿ ನೀರಿನ ಭ್ರಾಂತಿಯು ಒಂದು ಮೈಲಿ ದೂರದಲ್ಲಿರುವವರಿಗೆ ಬರುವುದು. ಮೃಗಗಳಿಗೂ ಬರುವುದಂತೆ. ನಿಜವಾಗಿ ನೀರಿಲ್ಲ, ನೀರಿನ ಭ್ರಾಂತಿ ಬಂದೇಬರುವುದು. ಅದು ಹೇಗೆ ಅಸತ್ಯವೋ ಹಾಗೆಯೇ ಈ ಪ್ರಪಂಚವು ಅಸತ್ಯವೆಂದು ತಿಳಿಯಬೇಕು.

19. **ಮೃತ್ತಿಕಾ- ಸುವರ್ಣ- ಅಯಸ್ಸು–ಈ ಮೂರು ದೃಷ್ಟಾಂತಗಳು.-**

ಪರಬ್ರಹ್ಮವೊಂದೇ ಇದ್ದು ವಿವಿಧ ಸೃಷ್ಟಿಯಾಗಿರುವುದಕ್ಕೆ ಕಾರಣ, **ಮೃತ್ತು, ಸುವರ್ಣ, ಅಯಸ್ಸು (ಕಬ್ಬಿಣ) ಈ ಮೂರು ದೃಷ್ಟಾಂತಗಳಿವೆ.** ಇವು ಛಾಂದೋಗ್ಯ ಉಪನಿಷತ್ತಿನ ದೃಷ್ಟಾಂತಗಳು. ಬ್ರಹ್ಮವೇ ಉಪಾದಾನಕಾರಣ. ಅದರ ಪರಿಣಾಮವಾಗಿರುವ ಪಂಚಭೂತಗಳೂ, ಭೌತಿಕ ಪ್ರಪಂಚವೂ ಸತ್‌ಬ್ರಹ್ಮವನ್ನು ಬಿಟ್ಟಿರುವುದಿಲ್ಲ. ಸದ್‌ಬ್ರಹ್ಮವೊಂದೇ ಸತ್ಯ. ಪರಿಣಾಮವೆಲ್ಲ ಅಸತ್ಯ. ಕೇವಲ ನಾಮಮಾತ್ರ ಎಂಬುದನ್ನು ಸ್ಪಷ್ಟಪಡಿಸಲು 3 ದೃಷ್ಟಾಂತಗಳನ್ನು ಕೊಟ್ಟಿರುವುದು

1) **ಮೃತ್ತಿನ**ಪರಿಣಾಮವಾದ ಗಡಿಗೆ, ಮಡಿಕೆ, ಕುಡಿಕೆ, ಶರಾವ, ಇತ್ಯಾದಿಗಳು ಆಕಾರಗಳಲ್ಲಿ ಬೇರೆಬೇರೆಯಾಗಿ ಕಾಣುವವು. ಎಲ್ಲವೂ ಮೃತ್ತಾಗಿಯೇ ಕಾಣುವವು. ಅದರಿಂದ ಮೃತ್ತೇ ಸತ್ಯ- **"ಮೃತ್ತಿಕೇತ್ಯೇವಸತ್ಯಂ ವಾಚಾರಂಭಣಂ ವಿಕಾರೋನಾಮಧೇಯಂ"** ಮೃತ್ತೆಂಬ ಉಪಾದಾನಕಾರಣವನ್ನು ಬಿಟ್ಟಿರುವ ಘಟಾದಿಗಳೂ ಮೃದ್ವಿಕಾರಗಳೂ ಅಸತ್ಯ. ಹುಟ್ಟುವ ಮೊದಲೂ ಮೃತ್ತು (ಮಣ್ಣೇ) ಹುಟ್ಟಿದಮೇಲೂ, ನಶಿಸಿದಮೇಲೂ ಮಣ್ಣೇ ಕಾಣುವುದು. ಅದರಿಂದ ಮೃತ್ತೇ ಸತ್ಯವು.

ಅದರಂತೆ **"ಸದೇವ ಸೌಮ್ಯೇದಮಗ್ರ ಆಸೀತ್"** ಎಂದು ಪರಮಾರ್ಥವಾಗಿ ಯಾವತ್ತೂ ಅಚ್ಚಳಿಯದಿರುವ ಸದ್ರೂಪವಾದ ಬ್ರಹ್ಮವೇ ಸತ್ಯ-ಅದರಿಂದ ಹುಟ್ಟಿದ ವಿಕಾರಗಳು ನಾಮಮಾತ್ರ, ಅಸತ್ಯ ಎಂದು ಅರಿಯಬೇಕು.

2) **ಸುವರ್ಣ ಚಿನ್ನ** ಇದರಿಂದ ತಯಾರಿಸಿದ ಕುಂಡಲ, ಬಳೆ, ಸರ, ಇತ್ಯಾದಿ ಆಭರಣಗಳು ಆಕಾರದಲ್ಲಿ ವಿವಿಧವಾಗಿದ್ದರೂ ಅವೆಲ್ಲವೂ ಚಿನ್ನವೇ; ಚಿನ್ನವನ್ನು ಬಿಟ್ಟು ಕಾಣುವುದಿಲ್ಲ. ಆದರಿಂದ ಸುವರ್ಣವೇ ಉಪಾದಾನ ಕಾರಣವಾಗಿದ್ದು ಸತ್ಯವಾಗಿರುವುದು. ವಿವಿಧ ಆಭರಣಗಳು ನಾಮಮಾತ್ರ, ಸತ್ಯವಲ್ಲ.

3) **ಅಯಸ್ಸು ಕೃಷ್ಣಾಯಸ** - ಅಂದರೆ ಕಪ್ಪಾದ ಲೋಹ, ಕಬ್ಬಿಣ. ಇದರಿಂದ ತಯಾರಾದ. ಕತ್ತಿ, ಕೊಡಲಿ, ಚಾಕು, ಚೂರಿ, ಬಾಣ-ಇವೇ ಮೊದಲಾದ ಪರಿಣಾಮಗಳು ನಾಮಮಾತ್ರ. ಎಲ್ಲವೂ ಕಬ್ಬಿಣವೇ. ಅದನ್ನು ಬಿಟ್ಟಿಲ್ಲ. ಅದರಿಂದ ಕಬ್ಬಿಣವೇ ಉಪಾದಾನ ಕಾರಣವಾಗಿದ್ದು ಸತ್ಯವೆನಿಸಿದೆ.

ಅದರಂತೆ ಬ್ರಹ್ಮವೊಂದೇ ಸತ್ಯ, ಅದರ ಪರಿಣಾಮವಾದ ಜಗತ್ತು ಸತ್ಯವಲ್ಲ, ಮಿಥ್ಯೆಯೆಂದು ಮೂರು ದೃಷ್ಟಾಂತಗಳ ಅರ್ಥವು.

## 20. ಪಕ್ಷಿಗಳ ದೃಷ್ಟಾಂತ

ಜೀವೇಶ್ವರರು ಈ ಶರೀರದಲ್ಲಿ ಹೃದಯದೊಳಗೆ ಇದ್ದರೂ, ಜೀವಾತ್ಮನು ಮಾತ್ರ ಸಂಸಾರದ ಸುಖದುಃಖಗಳನ್ನು ಅನುಭವಿಸು ವನು, ಈಶ್ವರನು ಅನುಭವಿಸುವುದಿಲ್ಲ. ಸುಮ್ಮನೆ ಸಾಕ್ಷಿಯಾಗಿ ನೋಡು ತ್ತಿರುವನೆಂದು ವ್ಯವಹಾರದಲ್ಲಿ ತಿಳಿಸಲು **ಎರಡು ಪಕ್ಷಿಗಳ ದೃಷ್ಟಾಂತ ವನ್ನು** ವೇದವು ಉದಾಹರಿಸಿರುವುದು

**ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ**
**ವೃಕ್ಷಂ ಪರಿಷಸ್ವಜಾತೇ |**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ**
**ಅನಶ್ನನ್ನನ್ಯೋ ಅಭಿಚಾಕಶೀತಿ ||**

ಒಂದು ಅಶ್ವತ್ಥ ವೃಕ್ಷದಂತೆ ಇರುವ ಈ ಶರೀರದಲ್ಲಿ ಎರಡು ಹಕ್ಕಿ ಗಳಂತೆ ಜೀವ, ಈಶ್ವರ ಎಂಬುವರು ಇದ್ದಾರೆ. ಅವುಗಳಲ್ಲಿ ಅಶ್ವತ್ಥದ ಹಣ್ಣಿನಂತಿರುವ ರುಚಿಕರವಾದ ಪುಣ್ಯದ ಫಲವನ್ನು ಜೀವಾತ್ಮನೆಂಬ ಒಂದು ಹಕ್ಕಿಯು ಮಾತ್ರ ತಿನ್ನುತ್ತಾ ಕೂತಿದೆ. ಮತ್ತೊಂದು ಹಕ್ಕಿ, ಈಶ್ವರ ಎಂಬುದು ಸುಮ್ಮನೆ ನೋಡುತ್ತಾ ಕೂತಿದೆ. ತಿನ್ನುತ್ತಿಲ್ಲ. ಏಕೆಂದರೆ, ಪುಣ್ಯವೇ ಇಲ್ಲ. ಅದರ ಫಲವೂ ಈಶ್ವರನಿಗಿಲ್ಲ. ಅದರಿಂದ ಸಾಕ್ಷಿಯಾಗಿದ್ದು ನೋಡುವನು.

ಈ ಮಂತ್ರದಲ್ಲಿ ಶರೀರವನ್ನು ಒಂದು ಅಶ್ವತ್ಥ ವೃಕ್ಷಕ್ಕೆ ಹೋಲಿ ಸಿದೆ. ಈ ಶರೀರವು ಎಂದಿಗೂ ನಿಲ್ಲುವುದಿಲ್ಲ. ನಾಳೆಯಿಂದಾದರೂ ನಶಿಸಿಹೋಗುವುದು. ಇದು ನಶ್ವರವೆಂಬುದನ್ನು ಉದಾಹರಣೆಯಿಂದ ಅರಿಯಬಹುದು. ಪಕ್ಷಿಯಂತೆ ಪುಣ್ಯವನ್ನು ಅನುಭವಿಸಲು ಒಂದು ಶರೀರವೆಂಬ ವೃಕ್ಷವನ್ನು ಆಶ್ರಯಿಸಲೇಬೇಕು. ಕರ್ಮದ ಫಲವು ಬಿಡುವುದು ಈ ವೃಕ್ಷದಲ್ಲೇ. ಫಲವನ್ನು ಕೊಡುವ ಈಶ್ವರನು ಇಲ್ಲಿಯೂ ಇರಬೇಕು. ಅವನೇ ನಮಗೆ ತೋರಿಸಿಕೊಡಬೇಕು.

## 21. ಸಂಸಾರಕ್ಕೆ ವೃಕ್ಷದ ದೃಷ್ಟಾಂತ

ಸಂಸಾರವನ್ನು ವರ್ಣಿಸುವಾಗ ಒಂದು ವಿಜಾತಿಯವಾದ ಅಶ್ವತ್ಥವೃಕ್ಷವೆಂದು ಹೇಳುತ್ತಾ ಅದರ ಸಾಮ್ಯವನ್ನು ಉಪನಿಷತ್ತು, ಗೀತೆ, ಎರಡರಲ್ಲೂ ತೋರಿಸಿದೆ.

**ಊರ್ಧ್ವಮೂಲ ಮಧಃಶಾಖಂ ಅಶ್ವತ್ಥಂ ಪ್ರಾಹುರವ್ಯಯಂ |**
**ಛಂದಾಂಸಿ ಯಸ್ಯಪರ್ಣಾನಿ, ಯಸ್ತಂವೇದ ಸವೇದವಿತ್ ||**
(ಗೀತೆ 15, 1)

**ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ |**
(ಕಠವಲ್ಲಿ)

ಈ ಸಂಸಾರವೃಕ್ಷಕ್ಕೆ ಮೂಲ, ಬೇರು, ಮೇಲೆ ಇವೆ, ಅಂದರೆ ಎಲ್ಲದಕ್ಕೂ ಮೇಲ್ಪಟ್ಟು ಇರುವುದು ಬ್ರಹ್ಮ. ಮಾಯಾಶಕ್ತಿಯಿಂದ ಕೂಡಿದೆ, ಇದುನಿತ್ಯ, ಮಹತ್ತಾದದ್ದು ಸರ್ವವ್ಯಾಪಕವಾದುದು, ಸರ್ವಜಗತ್ಕಾರಣ. ಮಹತ, ಅಹಂಕಾರ, ಪಂಚತನ್ಮಾತ್ರಾದಿಗಳೇ ಕೆಳಯಂತಿರುವ ಶಾಖೆಗಳು. ವೇದಗಳೇ ಎಲೆಗಳು. ವೃಕ್ಷವನ್ನು ರಕ್ಷಿಸುವುದರಿಂದ ಎಲೆಗಳೆಂದು ಕರೆಯಲ್ಪಟ್ಟಿವೆ.

ಸಂಸಾರ ಮಾಯೆಯು ಅನಾದಿಯಾಗಿ ಬಂದಿರುವುದರಿಂದ ಈ ವೃಕ್ಷವು ಅವ್ಯಯ; ನಾಶವಾಗದೇ ಇದೆ. ಕೊನೆಮೊದಲಿಲ್ಲದ ಸಕಲ ದೇಹ ಸಂತಾನಗಳಿಗೆ ಆಶ್ರಯವಾಗಿದೆ. ಬುದ್ಧಿಯೇ ಸ್ಕಂಧ, ಇಂದ್ರಿಯಗಳ ಸ್ಥಾನಗಳೇ ಪೊಟರೆಗಳು, ಧರ್ಮಾಧರ್ಮಗಳೇ ಹೂಗಳು, ಸುಖದುಃಖಗಳೇ ಫಲಗಳು. ಇದನ್ನು ಬ್ರಹ್ಮವೃಕ್ಷ, ಬ್ರಹ್ಮವನ ಎಂದೂ ರೂಪಕದಿಂದ ವರ್ಣಿಸುವುದುಂಟು. ಬ್ರಹ್ಮವೇ ನಿತ್ಯವೂ ಸಂಚರಿಸುವುದರಿಂದ ಬ್ರಹ್ಮವನ, ಬ್ರಹ್ಮವೃಕ್ಷವೆಂದೂ ಸಂಸಾರ ವೃಕ್ಷವನ್ನು ಕರೆದಿವೆ. ಸರ್ವಸಂಗಸಂನ್ಯಾಸ ಮಾಡಿ ಬ್ರಹ್ಮಜ್ಞಾನವನ್ನು ಪಡೆದು ಅಸಂಗ ಶಸ್ತ್ರದಿಂದ ಈ ವೃಕ್ಷವನ್ನು ಕತ್ತರಿಸಿದರೆ ಅವನು

ಪುನಃ ಜನ್ಮವೆತ್ತುವುದಿಲ್ಲ. ಮುಕ್ತನಾಗುವನು.

## 22. ಕ್ಷೇತ್ರದ ದೃಷ್ಟಾಂತ

**ಶರೀರಕ್ಕೆ ಕ್ಷೇತ್ರದ ಹೋಲಿಕೆ**ಯನ್ನು ಕೊಡುವುದು.
**ಇದಂ ಶರೀರಂ ಕೌಂತೇಯ ಕ್ಷೇತ್ರ ಮಿತ್ಯಭಿಧೀಯತೇ**

(ಗೀತೆ 13,1)

ಕ್ಷೇತ್ರ ಎಂದರೆ ಹೊಲ ಗದ್ದೆಯೆಂದರ್ಥ. ಅದರಲ್ಲಿ ಹೇಗೆ ಬೀಜವನ್ನು ಬಿತ್ತಿ ದವಸಧಾನ್ಯಗಳನ್ನು ಪಡೆಯುವರೋ ಹಾಗೆಯೇ ಶರೀರದಲ್ಲಿ ಕರ್ಮದ ಬೀಜವನ್ನು ಹುಟ್ಟುಹಾಕಿ ಅದರ ಫಲವನ್ನು ಅದರಲ್ಲೇ ಕಾಣುವುದರಿಂದ ಜೀವದ ಶರೀರವು ಕ್ಷೇತ್ರವೆಂದು ಕ್ಷೇತ್ರದ ಹೋಲಿಕೆಯಿಂದ ಹೇಳಲ್ಪಟ್ಟಿದೆ.

## 23. ಅಗ್ನಿ ದೃಷ್ಟಾಂತ

ಜ್ಞಾನವನ್ನು ಅಗ್ನಿಗೆ ಹೋಲಿಸಿದೆ

**"ಜ್ಞಾನಾಗ್ನಿಃ ಸರ್ವ ಕರ್ಮಾಣಿಭಸ್ಮಸಾತ್ ಕುರುತೇಽರ್ಜುನ||**

(ಗೀತೆ 4, 37)

ಚೆನ್ನಾಗಿ ಉರಿಯುವ ಬೆಂಕಿಯು ಕಟ್ಟಿಗೆಗಳನ್ನು ಭಸ್ಮ ಮಾಡುವಂತೆ ಜ್ಞಾನವು ಸಮಸ್ತ ಕರ್ಮಗಳನ್ನೂ ಸಂಚಿತ ಆಗಾಮಿ ಕರ್ಮಗಳನ್ನೂ ಭಸ್ಮ ಮಾಡುವುವು ಎಂಬುದೇ ಹೋಲಿಕೆ.

## 24. ನದಿ ಸಮುದ್ರ ದೃಷ್ಟಾಂತ

ಮುಕ್ತನು ಬ್ರಹ್ಮನಲ್ಲಿ ನಾಮರೂಪಗಳನ್ನು ಕಳೆದುಕೊಂಡು ಏಕವಾಗುವನೆಂದು ತಿಳಿಸಲು **ನದಿ, ಸಮುದ್ರ ದೃಷ್ಟಾಂತವನ್ನು** ಶ್ರುತಿಯು ಕೊಟ್ಟಿದೆ.

ಹೇಗೆ ನದಿಗಳು, ಗಂಗಾ ಯಮುನಾದಿಗಳು ಸಮುದ್ರಕ್ಕೆ ಹೋಗಿ ಸೇರಿದಮೇಲೆ, ಏಕವಾದಮೇಲೆ ಗಂಗೆ, ಯಮುನೆ ಎಂಬ ಹೆಸರನ್ನು

ಮತ್ತು ಆಕಾರವನ್ನು ಕಳೆದುಕೊಳ್ಳುವುವೋ, ಈ ಬಗೆಯಲ್ಲಿ ಏಕವಾಗಿ ರುವುವೋ, ಹಾಗೆಯೇ ಮುಕ್ತಾತ್ಮನು ಬ್ರಹ್ಮನಲ್ಲಿ ಏಕವಾಗುವಾಗ ನಾಮರೂಪಗಳಿಂದ (ಅಂದರೆ ನಾಮರೂಪಾತ್ಮಕವಾದ ಪ್ರಪಂಚದಿಂದ) ಬಿಡಲ್ಪಟ್ಟವನಾಗಿ ಪರಾಪರವಸ್ತುವನ್ನು ಹೊಂದುವನು. ಏಕವಾಗುವನು.

**ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿ**
**ನಾಮರೂಪೇ ವಿಹಾಯ**
**ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ**
**ಪರಾತ್ ಪರಂ ಪುರುಷ ಮುಪೈತಿ ದಿವ್ಯಂ ||**

ಪರಬ್ರಹ್ಮ ಸಮುದ್ರದಂತೆ, ಜೀವರು ನದಿಗಳಂತೆ ಎಂದು ಅರಿಯಬೇಕು.

## ೨೫. ಹೆಣ್ಣು ಆಡು ಮತ್ತು ಗಂಡು ಆಡಿನ ದೃಷ್ಟಾಂತ

ಈಶ್ವರಾಶ್ರಿತವಾದ ಮಾಯಾಶಕ್ತಿಯು ಸತ್ವರಜಸ್ತಮೋ ಗುಣಾತ್ಮಕವಾದುದು. ಇದು ಅನೇಕ ವಿಚಿತ್ರವಾದ ಜಗತ್ತನ್ನು ಸೃಷ್ಟಿಸುವುದು. ಒಬ್ಬ ಜೀವನು ಈ ಮಾಯೆಯನ್ನು (ಪ್ರಪಂಚರೂಪವಾದದ್ದನ್ನು) ಸೇವಿಸುತ್ತಾ ಹಿಂಬಾಲಿಸುವನು, ಭೋಗಿಸುವನು. ಮತ್ತೊಬ್ಬನು (ಮುಕ್ತನು) ಅನುಭವಿಸಿದ್ದ ಈ ಮಾಯೆಯನ್ನು ಬಿಟ್ಟುಬಿಡುವನೆಂದು ತಿಳಿಯಲು, ಆಡುಗಳ ದೃಷ್ಟಾಂತ.

ಒಂದು ಹೆಣ್ಣಾಡು ಕೆಂಪು, ಬಿಳಿ, ಕಪ್ಪು ಬಣ್ಣದ್ದು. ಇದೇ ಬಣ್ಣದ ಅನೇಕ ಮರಿಗಳನ್ನು ಹಾಕುತ್ತದೆಯೆಂದು ತಿಳಿಯಿರಿ. ಈ ಹೆಣ್ಣಾಡನ್ನು ಒಂದು ಗಂಡಾಡು ಸೇವಿಸುತ್ತಾ ಭೋಗಿಸುವುದು. ಮತ್ತೊಂದು ಗಂಡಾಡು ಈ ಹೆಣ್ಣಾಡನ್ನು ಭೋಗಿಸಿ ಬಿಟ್ಟುಬಿಡುವುದು. ಅದರಂತೆ ಹಿಂದೆ ಹೇಳಿದ ಸತ್ವರಜಸ್ತಮೋಗುಣಾತ್ಮಕವಾದ ಮಾಯೆಯು ಪೃಥಿವೀಜಲತೇಜೋರೂಪವಾಗಿ ಇದ್ದು ಅನೇಕ ವಸ್ತು ಸಮಾನವಾದ ಪ್ರಪಂಚವನ್ನು ಸೃಷ್ಟಿಸುವುದು.

ಇದು ಹೆಣ್ಣಾಡಿಗೆ ಸಮಾನ, ಬದ್ಧಜೀವನು ಗಂಡಾಡಿಗೆ ಸಮಾನನು. ಹೆಣ್ಣಾಡನ್ನು ಭೋಗಿಸಿಕೊಂಡಿರುವಂತೆ ಭೋಗಿಸುವನು. ಭೋಗ ಪಟ್ಟಿದ್ದ ಈ ಮಾಯೆಯನ್ನು ಮುಕ್ತಜೀವನು ಮಾತ್ರ ಬಿಟ್ಟು ಬಿಡುವನು. ಇವನನ್ನು ಭೋಗಿಸಿದ್ದ ಹೆಣ್ಣಾಡನ್ನು ಬಿಟ್ಟಿರುವ ಮತ್ತೊಂದು ಆಡಿಗೆ ಸಮಾನನೆಂದು ವರ್ಣಿಸಿರುವುದು.

**ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಂ**
**ಪ್ರಜಾಂ ಜನಯಂತೀಂ ಸರೂಪಾಂ ।**
**ಅಜೋಹ್ಯೇಕೋಜುಷ ಮಾಣೋಽನುಶೇತೇ ಜಹಾತ್ಯೇನಾಂ**
**ಭುಕ್ತ ಭೋಗಾಮಜೋಽನ್ಯಃ ॥**

## 26. ಮಹಾಮತ್ಸ್ಯ ದೃಷ್ಟಾಂತ

ಜಾಗರಾವಸ್ಥೆಯಿಂದ ಸ್ವಪ್ನಾವಸ್ಥೆಗೆ, ಸ್ವಪ್ನಾವಸ್ಥೆಯಿಂದ ಜಾಗರಾವಸ್ಥೆಗೆ ಹೀಗೆ ಸಂಚರಿಸುವ ಆತ್ಮನು (ಶುದ್ಧ ಪ್ರತ್ಯಗಾತ್ಮನು) ಎರಡು ಅವಸ್ಥೆಗಳ ಸುಖ ದುಃಖಗಳ ಹೊಡೆತಕ್ಕೆ ಸಿಕ್ಕದೆ ಇರುವನು, ಎಂಬುದಕ್ಕೆ **ಮಹಾಮತ್ಸ್ಯ ದೃಷ್ಟಾಂತ**. ಒಂದು ದೊಡ್ಡ ಮೀನು ಮಹಾನದಿಯಲ್ಲಿ ಒಂದು ದಡದಿಂದ ಮತ್ತೊಂದು ದಡಕ್ಕೆ ಸಂಚರಿಸು ವಾಗ ನೀರಿನ ಹೊಡೆತಕ್ಕೆ ಸಿಕ್ಕದೆ ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ ಸಂಚ ರಿಸುವುದು. ಅದರಂತೆ ಆತ್ಮನು ಜಾಗರ ಸ್ವಪ್ನಾವಸ್ಥೆಗಳಲ್ಲಿ ಸಾಕ್ಷಿಭೂತ ನಾಗಿಯೇ ಇರುವನು. ಅವಸ್ಥೆಗಳ ಹೊಡೆತಕ್ಕೆ ಸಿಕ್ಕುವುದಿಲ್ಲ.

**ತದ್ಯಥಾ ಮಹಾಮತ್ಸ್ಯಃ ಉಭೇಕೂಲೇ ಅನುಸಂಚರತಿ ಪೂರ್ವಂ**
**ಚಾಪರಂಚ ಏವಮೇವ ಅಯಂ ಪುರುಷಃ ಏತಾವುಭೌ**
**ಅಂತೌ ಅನುಸಂಚರತಿ, ಸ್ವಪ್ನಾಂತಂ ಜಾಗರಿತಾಂತಂಚ ॥**

(ಬೃ-೩)

### ೨೭. ಗರುಡ, ಗಿಡುಗ ಇವುಗಳ ದೃಷ್ಟಾಂತ.

ಜೀವಾತ್ಮನು ಜಾಗರಾವಸ್ಥೆ, ಸ್ವಪ್ನಾವಸ್ಥೆಗಳಲ್ಲಿ ಬಹಳ ಓಡಾಟ ಮಾಡಿ ಶ್ರಮಪಟ್ಟು ವಿಶ್ರಾಂತಿಗಾಗಿ ಸುಷುಪ್ತಿ ಸ್ಥಾನಕ್ಕೆ ಬರುವನು. ಅಂದರೆ ಸಕಲ ದುಃಖವನ್ನೂ ಮರೆಯಿಸುವ ಸುಷುಪ್ತಿಯಲ್ಲಿ, ಪರಬ್ರಹ್ಮನಲ್ಲಿ ವಿಶ್ರಾಂತಿಯನ್ನು ಹೊಂದುವನು. ಈ ವಿಶ್ರಾಂತಿಗಾಗಿಯೇ ಈ ಅವಸ್ಥೆಗೆ ಬರುವನು. ಇದಕ್ಕೆ ಗರುಡ ಅಥವಾ ಗಿಡುಗನ ದೃಷ್ಟಾಂತ- ಆಕಾಶದಲ್ಲಿ ಒಂದು ಗಿಡುಗ ಅಥವಾ ಗರುಡಪಕ್ಷಿಯು ಬಹು ಹೊತ್ತು ಹಾರಾಟವಾಡಿ ಬಹಳ ಶ್ರಮ ಕಂಡಮೇಲೆ ಹೇಗೆ ವಿಶ್ರಾಂತಿಗಾಗಿ ತನ್ನ ಗೂಡಿಗೆ ಬಂದು ಸೇರುವುದೋ ಹಾಗೆ.

### ೨೮. ಬಿಟ್ಟ ಬಾಣದ ದೃಷ್ಟಾಂತ

ಧನುರ್ಧಾರಿಯು ಲಕ್ಷ್ಯವನ್ನು ಗುರಿಯಿಟ್ಟು ಹೊಡೆದ ಬಾಣದ ವೇಗ ದೃಷ್ಟಾಂತ- (ಮುಕ್ತಬಾಣ ವೇಗ ದೃಷ್ಟಾಂತ)

ಜೀವನ್ಮುಕ್ತನಿಗೆ ತತ್ವ ಜ್ಞಾನವು ಬಂದು ಅದರಿಂದ ಸಂಚಿತವಾದ ಕರ್ಮಗಳೂ ಆಗಾಮಿ (ಭವಿಷ್ಯ)ಕರ್ಮಗಳೂ ನಾಶವಾದರೂ ಪ್ರಾರಬ್ಧ ಕರ್ಮವು ನಶಿಸುವುದಿಲ್ಲ. ಪ್ರಾರಬ್ಧ ಕರ್ಮವು ಅವರ ಫಲವನ್ನು ಪೂರ್ತಿ ಅನುಭವಿಸಿದ ನಂತರವೇ ನಶಿಸುವುದು. ಈ ವಿಷಯವನ್ನು ತಿಳಿಸಲು ಶಂಕರರು ಈ ದೃಷ್ಟಾಂತವನ್ನು ಕೊಡುವರು. ಧನುರ್ಧಾರಿಯು ಒಂದು ಮೃಗವನ್ನು ಹೊಡೆಯಲು ವೇಗವನ್ನಿಟ್ಟು ಬಿಟ್ಟ ಬಾಣವು ಗುರಿಯಿಟ್ಟ ಮೃಗವನ್ನು ಹೊಡೆದ ಮೇಲೂ ಆ ಬಾಣವು, ಇಟ್ಟ ವೇಗವು ಕ್ಷಯಿಸುವವರೆಗೂ ಅದರ ಮುಂದಕ್ಕೂ ಹೋಗಿ ಕಲ್ಲು ಬಂಡೆಗೆ ಹೊಡೆದು ಬೀಳುವುದು. ಹಾಗೆಯೇ ತತ್ವಜ್ಞಾನವು ಜೀವನ್ಮುಕ್ತನ ಸಂಚಿತ ಕರ್ಮಗಳನ್ನೂ, ಆಗಾಮಿ ಕರ್ಮಗಳನ್ನೂ ನಾಶಪಡಿಸಿದರೂ ಜ್ಞಾನವು ಬಂದ ಮುಕ್ತಶರೀರದ ಪ್ರಾರಬ್ಧ ಕರ್ಮವನ್ನು ನಾಶಪಡಿಸುವುದಿಲ್ಲ. ಪ್ರಾರಬ್ಧ ಕರ್ಮದ ವೇಗವು ಅಂದರೆ ಫಲವನ್ನು ಕೊಡಲು ಆರಂಭಿಸಿದ ಕರ್ಮದ ವೇಗವು ತನ್ನ ಫಲವನ್ನು ಅನುಭವಿಸಿದ ನಂತರವೇ ಕ್ಷಯಿಸುವುದು. ಅಲ್ಲಿಯ ಪರ್ಯಂತರ ಜೀವನ್ಮುಕ್ತನು ಇರುವ ದೇಹವನ್ನು ಬಿಡುವುದಿಲ್ಲ. ನಿರಭಿಮಾನಿಯಾಗಿಯೇ ಇರುವನು. ಜೀವನ್ಮುಕ್ತರಾದವರು

ಪ್ರಾರಬ್ಧ ಕರ್ಮವನ್ನು ಸವೆಸಿ ದೇಹವನ್ನು ಬಿಡುವರು. ವೇದವ್ಯಾಸರು, ವಸಿಷ್ಠರು, ಶುಕರು, ವಾಮದೇವರು, ಭೃಗುಮುನಿ, ಪರಾಶರರು ಇವರೇ ಮೊದಲಾದವರು. ಹಾಗೆಯೇ ನಾರದರು, ಯಾಜ್ಞವಲ್ಕ್ಯರು, ನಮ್ಮ ಭಗವತ್ಪಾದರು- ಇವರೇ ಮೊದಲಾದವರು ಉದಾಹರಣೆಯಾಗಿದ್ದಾರೆ.

## 29. ಸರ್ಪವು ಬಿಟ್ಟ ಪೊರೆಯ ದೃಷ್ಟಾಂತ

ಜೀವನ್ಮುಕ್ತನಾದವನು ಇಲ್ಲಿಯೇ ಸರ್ವಾತ್ಮನಾಗಿದ್ದು ಸಂಸಾರದಿಂದ ಬಿಡುಗಡೆ ಹೊಂದಿದವನು. ಹೇಗೆ? ಅಂದರೆ ಸರ್ಪವು ಹುತ್ತದ ಮೇಲೆ ಪೊರೆಯನ್ನು ಬಿಟ್ಟ ಅನಂತರ ಪೊರೆಯು, ಸತ್ತು ನಿರ್ಜೀವವಾಗಿಯೇ ಇದೆಯೆಂದು ಅದರ ಅಭಿಮಾನವನ್ನು ತ್ಯಜಿಸಿದ್ದ ಸರ್ಪದಿಂದ ಬೇರ್ಪಟ್ಟು ಬಿದ್ದಿರುವುದೋ, ಹಾಗೆಯೇ ಮುಕ್ತಾತ್ಮನು ತನ್ನ ಆತ್ಮವಲ್ಲ ಎಂದು ಅಭಿಮಾನವನ್ನು ಬಿಟ್ಟು ತ್ಯಜಿಸಿದ ತನ್ನ ದೇಹವು ಬದ್ಧರ ದೃಷ್ಟಿಯಲ್ಲಿ ಬೇರೆ ತರಹ ತೋರಿದರೂ ಮುಕ್ತನ ದೃಷ್ಟಿಯಲ್ಲಿ ಸತ್ತ ದೇಹದಂತೆ ಮಲಗಿರುವುದು. ಈ ದೆಸೆಯಲ್ಲಿ ಸರ್ಪದಂತಿರುವ ಮುಕ್ತನು ಸರ್ವಾತ್ಮನಾಗಿ ಸರ್ಪದಂತೆ ದೇಹದಲ್ಲೇ ಇದ್ದರೂ ನಿರಭಿಮಾನಿಯಾದ ಕಾರಣ ಶರೀರವಿಲ್ಲದವನೇ ಆಗುವನು. ಅಜ್ಞಾನಿಯಾಗಿದ್ದಾಗ ಶರೀರಾಭಿಮಾನದಿಂದ ಶರೀರವುಳ್ಳವನಾಗಿದ್ದಂತೆ, ಜ್ಞಾನವು ಹುಟ್ಟಿದ ಮೇಲೆ ಹಾಗಿರುವುದಿಲ್ಲ. ಮೊದಲು ಅಜ್ಞಾನ, ಕಾಮಕರ್ಮಗಳಿಂದ ಆತನು ಸಶರೀರನಾಗಿದ್ದ. ಅಜ್ಞಾನಾದಿಗಳು ಜ್ಞಾನದಿಂದ ತೊಲಗಿದ ಮೇಲೆ ಶರೀರವಿಲ್ಲದ ಪರಿಶುದ್ಧವಾದ ಪರಬ್ರಹ್ಮವಾಗಿಬಿಡುವನೆಂದು ಅಭಿಪ್ರಾಯವು.

## 30 ತೃಣಜಲೂಕಾ ದೃಷ್ಟಾಂತ

ಜಿಗಣೆ ಅಥವಾ ಇಂಬಳ ಎಂದು ತೃಣಜಲೂಕಾ ಶಬ್ದದ ಅರ್ಥ. ಈ

ಜಿಗಣೆಯು ಒಂದು ಹುಲ್ಲು ಕಡ್ಡಿಯ ತುದಿಯಲ್ಲಿ ನಿಂತು ಮುಂದಿರುವ ಹುಲ್ಲುಕಡ್ಡಿಯನ್ನು ಕಚ್ಚಿಕೊಂಡೇ ಹಿಂದಿನ ಕಡ್ಡಿಯನ್ನು ಬಿಡುವುದು. ಅದರಂತೆ ಸಾಯುವಾಗ ಜೀವಾತ್ಮನು ಮುಂದಿನ ದೇಹವನ್ನು ಹಿಡಿದುಕೊಂಡೇ ಹಿಂದಿನ ದೇಹವನ್ನು ಬಿಡುವನು, ಎಂಬುದನ್ನು ಜಲೂಕಾ ದೃಷ್ಟಾಂತದಿಂದ ತಿಳಿಯಬೇಕು. ಅದು ಹೇಗೆ ಎಂದರೆ, ದೇಹವನ್ನು ಮನುಷ್ಯನು ಬಿಡುವ ಮುಂಚೆ ತನ್ನ ಹೃದಯದಲ್ಲಿರುವ ಹಿಂದೆ ಕಳೆದುಹೋದ ಕರ್ಮ ಫಲಾನುಭವದಿಂದ ಉಂಟಾದ ಸಂಸ್ಕಾರವೆಂಬ ವಾಸನೆಯು (ಪೂರ್ವ ಸಂಸ್ಕಾರವು) ಉಪಾಸನೆ–ಕರ್ಮ ಇವುಗಳಿಂದ ಬರುವ ಮುಂದಿನ ದಿವ್ಯ ದೇಹವನ್ನು ಮುಟ್ಟುವುದು. ಅಂದರೆ 'ನಾನು ದೇವನಾಗಿದ್ದೇನೆ' ಎಂಬುದಾಗಿ ಮುಂದೆ ಬರುವ ದಿವ್ಯದೇಹದಲ್ಲಿ ಸ್ಮರಣೆಯು ಬರುವುದು. ಸ್ವಪ್ನದಲ್ಲಿ ಆಗುವಂತೆ ಈ ಜಾತಿಯಾದ ಸಂಸ್ಕಾರವು ಮರಣ ಕಾಲದಲ್ಲಿ ಎದ್ದು ತೋರಿ ಆ ದೇಹವನ್ನು ಭಾವನಾಮಾತ್ರದಿಂದ ಜೀವಾತ್ಮನು ಮೊದಲು ಹಿಡಿದುಕೊಂಡೇ ಅನಂತರ ಈ ಮನುಷ್ಯ ದೇಹವನ್ನು ಬಿಡುವನೆಂದು ತಾತ್ಪರ್ಯ.

ಆ ವಾಸನೆಯು ಹೃದಯದಲ್ಲಿ ಉಪಾಸನ-ಕರ್ಮಾಧೀನವಾಗಿ ಜಿಗಣೆಯಂತೆ ಹಿಡಿದುಕೊಂಡೇ ಅವಿಚ್ಛಿನ್ನವಾಗಿರುತ್ತದೆ. ಮತ್ತು ಮುಂದಿನ ಜನ್ಮ ಕೊಡುವುದು. ಸ್ವಪ್ನದಲ್ಲಿ ನಾನೇ ದೇವನಾಗಿದ್ದೇನೆಂದು ಅಭಿಮಾನಿಸಿಕೊಳ್ಳುವವನು ಹೇಗೆ ದೇಹದೊಳಗೇ ಇರುವನೋ ಹಾಗೆಯೇ ಉತ್ಕ್ರಾಂತಿಯಾಗುವ ಮುಂಚೆ ಹೀಗೆ ದೇಹದಲ್ಲೇ ಈ ಭಾವನೆಯು ಹುಟ್ಟುವುದೆಂದೂ, ಅದರಿಂದ ಕರ್ಮಾಧೀನವಾದ ಮುಂದಿನ ದಿವ್ಯ ದೇಹವನ್ನು ಮುಟ್ಟುವನೆಂದೂ ಅರಿಯಬೇಕು.

## 31. ಭಾರವನ್ನು ಹೊತ್ತ ಗಾಡಿಯ ದೃಷ್ಟಾಂತ

ಮರಣಹೊಂದುವವನು ಭಾರವನ್ನು ಹೊತ್ತ ಗಾಡಿಯು ಯಾವ ರೀತಿ ಕೂಗುತ್ತಾ ಹೋಗುವುದೋ ಹಾಗೆಯೇ ಈ ದೇಹವನ್ನು ಬಿಡುವಾಗ

ಮರ್ಮಸ್ಥಾನದ ವೇದನೆಯು ದುಃಖದಿಂದ ಕೂಗುತ್ತಾ ಹೋಗುವನು. ಈತನು ಉಪಾಸನಾ, ಕರ್ಮ, ವಾಸನಾ ಇವುಗಳ ಭಾರವನ್ನು ಹೊತ್ತು ಕೇವಲ ಸೂಕ್ಷ್ಮ ಶರೀರೋಪಾಧಿಯೊಡನೆ ಸೇರಿ ಹೋಗುವನು.

## 32. ಸ್ವರ್ಣಕಾರನು ತಯಾರಿಸುವ ಹೊಸಹೊಸ ಚಿನ್ನದ ಆಭರಣಗಳ ದೃಷ್ಟಾಂತ

ಸ್ವರ್ಣಕಾರನು (ಸೊನ್ನಗಾರನು) ಒಂದೇ ಒಂದು ಗಟ್ಟಿ ಚಿನ್ನವನ್ನು ಕೊಂಡು ಅದನ್ನು ಕಟಕ, ಕುಂಡಲ, ಕಿರೀಟ, ಮುಂತಾದ ಆಭರಣಗಳಾಗಿ ಹೊಸ ಹೊಸದಾಗಿ ತಯಾರಿಸುವನು. ಒಂದೆ ಒಂದು ಸಲ ತಯಾರಿಸಿದ ಅಭರಣವನ್ನು ಕರಗಿಸಿ ಮತ್ತೊಂದು ಆಭರಣ ಮಾಡುವಾಗಲೂ ಅದೇ ಚಿನ್ನವನ್ನು ಉಪಯೋಗಿಸುವಂತೆ, ಪೂರ್ವ ಜನ್ಮದಲ್ಲಿ ಈ ಸ್ಥೂಲ ಶರೀರಕ್ಕೆ ಬೇಕಾದ ಪಂಚಭೂತ ಸೂಕ್ಷ್ಮಗಳು ಯಾವುವು ಇದ್ದವೋ, ಅದೇ ಪಂಚಭೂತ ಸೂಕ್ಷ್ಮಗಳನ್ನು ಪುನಃ ಪುನಃ ಸ್ವೀಕರಿಸಿ ಅವುಗಳಿಂದಲೇ ಹೊಸ ಹೊಸ ಶರೀರವನ್ನು ಆತ್ಮನು ರಚಿಸಿ ಕೊಳ್ಳುವನು. ಆ ಶರೀರವು ಪಿತೃದೇವತೆಯ ಶರೀರವೋ, ಗಂಧರ್ವ ಶರೀರವೋ, ಬ್ರಹ್ಮ ಲೋಕದ ದಿವ್ಯ ಶರೀರವೋ, ಮನುಷ್ಯ ಶರೀರವೋ, ಆಯಾಯಾ ಕರ್ಮಾನುಸಾರವಾಗಿ ಆತ್ಮನು ಸೃಷ್ಟಿಸಿಕೊಳ್ಳುವನು.

## 33. ಅಲಾತ ಚಕ್ರ ದೃಷ್ಟಾಂತ

ಅಲಾತ ಎಂದರೆ ಉರಿಯುವ ಕೊಳ್ಳಿ. ಈ ಕೊಳ್ಳಿಯನ್ನು ಚಕ್ರ ದಂತೆ ದುಂಡಾಗಿ ವೇಗವಾಗಿ ತಿರುಗಿಸಿದರೆ ಚಕ್ರಾಕಾರವಾಗಿ ಕಾಣು ತ್ತದೆ. ಅಡ್ಡಾದಿಡ್ಡಿ ಬೀಸಿದರೆ ವಕ್ರವಾಗಿ ಕಾಣುತ್ತದೆ. ನೆಟ್ಟಗೆ ಬೀಸಿದರೆ ಋಜುವಾಗಿ- ಉದ್ದವಾಗಿ ಕಾಣುತ್ತದೆ. ಹೀಗೆ ಚಕ್ರಾಕಾರ ವಾಗಿ, ವಕ್ರವಾಗಿ, ಉದ್ದಕ್ಕೆ ನಾನಾ ಬಗೆಯಾಗಿ ಕಂಡರೂ ನಿಜವಾಗಿ ಕೊಳ್ಳಿಯಲ್ಲಿ ಯಾವ ಆಕಾರವೂ ಇರುವುದಿಲ್ಲ. ಆಯಾಯಾ ಆಕಾರ

[illegible] ತೋರುವುದು ಭ್ರಾಂತಿ. ಅಲ್ಲಾಡಿಸದೆ ಹಾಗೆಯೇ ಇರಿಸಿಕೊಂಡರೆ ನೀರುಗುಂಡದ ಆಕಾರಗಳು ಕಾಣುವುದಿಲ್ಲ. ಹಾಗೆಯೇ ಚಿತ್ತ (ವಿಜ್ಞಾನ) ವಾದ, ಯಾವುದೊಂದೂ ರೂಪದಿಂದ ಹುಟ್ಟುವುದಿಲ್ಲ. ಗ್ರಾಹ್ಯ, ಗ್ರಾಹಕ ಎಂಬುವ ಭೇದವು ತೋರದೆ ಒಂದೇ ರೀತಿಯಲ್ಲಿರುವುದು.

ಕೊಳ್ಳಿಯು ಅಲ್ಲಾಡುವಾಗ ಚಕ್ರಾಕಾರ, ಋಜು, ವಕ್ರಾದಿ ಆಕಾರಗಳು ತೋರುತ್ತವೆಯಷ್ಟೆ. ಅವುಗಳು ಬೇರೆ ಯಾವುದರಿಂದಲೂ ಹುಟ್ಟುವುದಿಲ್ಲ. ಕೊಳ್ಳಿಯನ್ನು ಬಿಟ್ಟು, ಬೇರೆ ಒಂದು ಕಡೆ ಹುಟ್ಟಿ ಬಂದು ಕೊಳ್ಳಿಯಲ್ಲಿ ಬಂದು ಸೇರಿದೆಯೆಂದು ಹೇಳಲಾಗದು. ಕೊಳ್ಳಿ ಅಲ್ಲಾಡದೆಯಿದ್ದರೆ ಚಕ್ರಾದಿ ಆಕಾರಗಳು ಬೇರೆ ಎಲ್ಲಿಗೂ ಹೋಗಿ ಸೇರುವುದಿಲ್ಲ. ಈ ಕೊಳ್ಳಿಯೊಳಗೂ ಪ್ರವೇಶಿಸುವುದಿಲ್ಲ. ಈ ಕೊಳ್ಳಿಯಿಂದ ಹೊರಗೂ ಹೋಗಲಾರವು. ಏಕೆಂದರೆ ಅವು ವಸ್ತುಗಳಲ್ಲ. ವಸ್ತುವಾಗಿದ್ದರೆ ಇಲ್ಲಿಂದ ಹೊರಕ್ಕೂ ಹೋಗಬಹುದು. ಒಳಗೂ ಪ್ರವೇಶಿಸಬಹುದು. ವಸ್ತುವಲ್ಲದ್ದು ಎಂದಿಗೂ ಹೀಗಿರುವುದಿಲ್ಲ. ಆದರಿಂದ ಕೊಳ್ಳಿಯನ್ನು ಬಿಟ್ಟು ಹೊರಗೆ ಹೋಗಿಲ್ಲ.

ಇದರಂತೆಯೇ, ಬುದ್ಧಿ ವಿಜ್ಞಾನದಲ್ಲೂ ಉತ್ಪತ್ತಿ, ಚಲನ, ವಸ್ತು, ರೂಪ, ಇವು ಯಾವುದೂ ಇರುವುದೇ ಇಲ್ಲ. ಆದರೂ ಹುಟ್ಟಿದಂತೆಯೂ, ಚಲಿಸಿದಂತೆಯೂ, ವಸ್ತುವಾಗಿರುವಂತೆಯೂ ತೋರುವುದು- ಇಲ್ಲಿ ವಿಜ್ಞಾನವೆಂದರೆ ವೇದಾಂತಿಗಳು ಹೇಳುವ ನಿತ್ಯ ವಿಜ್ಞಾನ ಸ್ವರೂಪವಾದ ಬ್ರಹ್ಮವಲ್ಲ. ಇದು ಚಿತ್ತ. **'ಏವಂ ನಜಾಯತೆ ಚಿತ್ತಂ, ಏವಂ ಧರ್ಮಾ ಅಜಾಃ ಸ್ಮೃತಾಃ'** ಎಂದು ೪೬ನೇ ಗೌ. ಕಾರಿಕೆಯಿಂದ ತಿಳಿಯುವುದು- ಹೀಗೆಂದು ವಿಧುಶೇಖರ ಭಟ್ಟಾಚಾರ್ಯರ ವ್ಯಾಖ್ಯಾನದ ಅಭಿಪ್ರಾಯ.

ಭಾಷ್ಯಕಾರರು ಮಾತ್ರ ವಿಜ್ಞಾನ-ಎಂದರೆ ವಿಜ್ಞಪ್ತಿಯೆಂದು ನಿತ್ಯ ವಿಜ್ಞಾನ ಸ್ವರೂಪದ ಆತ್ಮವೆಂದು ವ್ಯಾಖ್ಯಾನಿಸಿದ್ದಾರೆ. ಇಂತಹ ವಿಜ್ಞಾನವನ್ನು ಜನ್ಮಾದಿಗಳಿಲ್ಲದ ಅದ್ವಿತೀಯವಾದ ಆತ್ಮ ತತ್ತ್ವವೆಂದು ತಿಳಿದವರು ಸಂಸಾರ ಭ್ರಮದಲ್ಲಿ ಬೀಳುವುದಿಲ್ಲ ಎಂದು ತಿಳಿಯಬೇಕು.

ಗೌ. ಕಾರಿಕಾ ೪೭ ರಿಂದ ೫೨ ರವರೆಗಿನ ಕಾರಿಕೆಗಳನ್ನು ಇಲ್ಲಿ ಉದಾಹರಿಸಿದೆ. ಅಲಾತದಲ್ಲಿ ನಾವು ವಿವಿಧವಾಗಿ ಭ್ರಮಿಸುವಂತೆ ನಿತ್ಯ ವಿಜ್ಞಾನ ರೂಪವಾದ ಆತ್ಮನಲ್ಲಿ ಜನನಾದಿಗಳನ್ನು ಕಲ್ಪಿಸಿ ಭ್ರಮಿಸಿದ್ದೇವೆ. ನಿಜವಾಗಿ ಆತ್ಮನಲ್ಲಿ ಅವುಗಳಿಲ್ಲವೆಂದು ಮೇಲಿನ ಉದಾಹರಣೆಯಿಂದ ಅರಿಯಬೇಕು.

## 34. ಮರಕತ ಮಣಿ ದೃಷ್ಟಾಂತ

ಸ್ವಯಂಪ್ರಕಾಶನಾದ ಆತ್ಮನು ಶರೀರ, ಇಂದ್ರಿಯ, ಬುದ್ಧಿ, ಮನಸ್ಸು ಈ ಕಾರ್ಯಕರಣ ಸಮುದಾಯವನ್ನು ಚೈತನ್ಯಸ್ವರೂಪವಾದ ತನ್ನ ಜ್ಯೋತಿಯಿಂದ ಪ್ರಕಾಶಗೊಳಿಸುವನು. ಚೈತನ್ಯ (ಜ್ಞಾನ)ವು ಇರುವಂತೆ ಮಾಡುವನು.

ಹೇಗೆ ಮರಕತಮಣಿಯನ್ನು ಹಾಲಿನಲ್ಲಿ ಇಟ್ಟಾಗ ಅಂದರೆ ಅದನ್ನು ಪರೀಕ್ಷಿಸುವುದಕ್ಕಾಗಿ ಹಾಲಿನೊಳಗೆ ಇಟ್ಟು ನೋಡಿದರೆ ನಿಜವಾದ ಮರಕತವಾದರೆ ಅದು ತನ್ನ ಹಸುರಾದ ಕಾಂತಿಯಿಂದ ಹಾಲನ್ನು ಹಸರಾಗಿರುವಂತೆ ಮಾಡುವುದು. ಹಾಗೆಯೇ ನೀಲಮಣಿಯೂ ಸಹ ಹಾಲಿನಲ್ಲಿಟ್ಟಾಗ ಹಾಲೂ ನೀಲಿಯಾಗಿರುವಂತೆ ತೋರ್ಪಡಿಸುವುದು. ಹಾಗೆಯೇ ಅತಿ ಸೂಕ್ಷ್ಮವಾದ ನಮ್ಮ ಬುದ್ಧಿಯು ಕನ್ನಡಿಯಂತೆ ದೈವ ನಿರ್ಮಾಣದಲ್ಲಿ ಸ್ವಚ್ಛವಾಗಿರುವುದರಿಂದ ಅದರಲ್ಲಿ ಮೊಟ್ಟಮೊದಲು ನಿತ್ಯಚೈತನ್ಯದ ಛಾಯೆ (ಪ್ರತಿಬಿಂಬವು) ಬೀಳುತ್ತದೆ. ಆಗ ನಮಗೆ ಬುದ್ಧಿವಿಜ್ಞಾನವೇ ಆತ್ಮವೆಂಬ ಭ್ರಾಂತಿಯು ಬರುತ್ತದೆ. ಪಂಡಿತರಿಗೂ ಇದೇ ಆತ್ಮವೆಂಬ ಭ್ರಾಂತಿಯುಂಟಾಗುವುದು ಸಹಜ. ಹಾಗೆಯೇ ಬುದ್ಧಿಯ ಹತ್ತಿರ ಇರುವ ಮನಸ್ಸಿನ ಮೇಲೆ ಬುದ್ಧಿಯ ಸಂಪರ್ಕದಿಂದ ಆತ್ಮಛಾಯೆಯು ಬಿದ್ದು ಮನಸ್ಸೇ ಜ್ಞಾನವುಳ್ಳ ಆತ್ಮವೆಂದು ಅರಿವಾಗುವುದು. ಅನಂತರ ಮನಸ್ಸಿನ ಸಂಪರ್ಕದಿಂದ ಇಂದ್ರಿಯಗಳಲ್ಲಿ ಜ್ಞಾನದ ಬೆಳಕು ಬೀಳುವುದು, ಅದರಂತೆ ಇಂದ್ರಿಯ ಸಂಪರ್ಕ

...ದ ಈ ನಮ್ಮ ಸ್ಥೂಲ ಶರೀರದಲ್ಲಿ ನಖ, ಶಿಖೆ ಪರ್ಯಂತರ ಚೈತನ್ಯ ...ನತ್ತ ಪ್ರಸಾರವಾಗಿ ದೇಹವೇ ಆತ್ಮನೆಂಬ ಅಭಿಮಾನವು ಈಗ ...ರಿಗೂ ಇರುವಂತೆ ಹುಟ್ಟುವುದು. ಹೀಗೆ ಮರಕತಮಣಿಯಂತೆ ಈ ... ಚೈತನ್ಯವು ಬುದ್ಧಿ ಮುಂತಾದವುಗಳಲ್ಲಿ ಜ್ಞಾನದ ಬೆಳಕನ್ನು ಚೆಲ್ಲಿ ...ಭಿಮಾನವನ್ನುಂಟು ಮಾಡಿರುವುದು.

...ಕಾಶಿಸಲ್ಪಡುವ ಬುದ್ಧಿ, ಪ್ರಕಾಶಗೊಳಿಸುವ ಆತ್ಮ ಇವುಗಳನ್ನು ...ಸಿ ತಿಳಿಯದ ಅಜ್ಞರಿಗೆ 'ಅಹಂ' ಎಂದು ಕಾಣಿಸುವುದು. (ದೀಪವು) ...ದ ಬೆಳಕು ಕೆಂಪು ಬಣ್ಣದ ವಸ್ತುವಿನ ಮೇಲೆ ಬಿದ್ದಾಗ ಬೆಳಕು ...ಗಿಯೂ, ನೀಲಿ ಬಣ್ಣದ ವಸ್ತುವಿನ ಮೇಲೆ ಬಿದ್ದಾಗ ನೀಲಿಯಾ ...ಯೂ. ಹಸಿರು ಬಣ್ಣದ ಮೇಲೆ ಬಿದ್ದಾಗ ಹಸಿರಾಗಿಯೂ, ಈ ಬೆಳಕು ... ಬಣ್ಣವಾಗಿ ಕಾಣಿಸುವುದು, ಹೇಗೋ, ಹಾಗೆಯೇ ಬುದ್ಧಿಯನ್ನು ...ಕಾಶಗೊಳಿಸುವಾಗ ಬುದ್ಧಿಯೇ ತನ್ನ ಅಹಂಕಾರ ಮಮಕಾರಗಳಿಂದ ...ರ್ತೃ, ಭೋಕ್ತೃ ಇತ್ಯಾದಿ ರೂಪಗಳಿಂದ ಆತ್ಮ ಚೈತನ್ಯವು ಹಾಗೆ ...ರುವಂತೆ ಮಾಡುವುದು.

ಹೀಗೆಯೇ ಬುದ್ಧಿಯ ಮೂಲಕ ನಮ್ಮ ಸಮಸ್ತ ದೇಹವನ್ನು ...ನು ಬೆಳಗುತ್ತಾ ಮರಕತಮಣಿಯಂತೆ ತನ್ನ ಛಾಯೆಯನ್ನು ...ಟ್ಟು ಆತ್ಮಾಭಿಮಾನವನ್ನುಂಟು ಮಾಡಿ ಪ್ರಕಾಶಗೊಳಿಸುವನು ಎಂದು ಅರಿಯಬೇಕು.

35. ಜನನ ಮರಣರೂಪ ಸಂಸಾರ ವರ್ಣನೆಯ ಸಂದರ್ಭದಲ್ಲಿ **ಶಕಟ ದೃಷ್ಟಾಂತವನ್ನು** ಕೊಟ್ಟಿದೆ.

**ತದ್ಯಥಾನಃ ಸುಸಮಾಹಿತ ಮುತ್ಸರ್ಜದ್ಯಾಯಾ**
**ದೇವಮೇವಾಯಂ ಶಾರೀರ ಆತ್ಮಾ ಪ್ರಾಜ್ಞೇನ**
**ಆತ್ಮನಾಽನ್ವಾರೂಢಃ ಉತ್ಸರ್ಜನ್ ಯಾತಿಯತ್ರೈ**
**ತದೂರ್ಧ್ವೋಚ್ಛ್ವಾಸೀ ಭವತಿ** (ಬೃ-೪, ೩)

ಈ ದೇಹವನ್ನು ಬಿಟ್ಟು ಬೇರೆ ದೇಹವನ್ನು ಹೊಂದುವಾಗ(ಈ ಮನುಷ್ಯ ಜೀವನು ಅಂದರೆ ಅಂತಃಕರಣದ ಉಪಾಧಿಯಿಂದ ಕೂಡಿದ ಆತ್ಮನು) ಸ್ವಯಂಜ್ಯೋತಿ ಸ್ವರೂಪನಾದ ಪರಮಾತ್ಮನೊಡನೆ ಉತ್ಕ್ರಾಂತಿ ಕಾಲದಲ್ಲಿ ಏಕನಾಗಿದ್ದು, ಮುಖ್ಯ ಪ್ರಾಣವು ಹೊರಟ ಕೂಡಲೆ ಅದರೊಂದಿಗೆ ಹೋಗುವನು. ಹೋಗುವಾಗ ಮೊದಲು ಮರ್ಮಸ್ಥಾನಗಳು ಕಿತ್ತುಹೋದಂತೆ ಆಗುತ್ತಿರಲು ಆ ದುಃಖಾತಿರೇಕ ದಿಂದ ಪೀಡಿತನಾಗಿ ಕೂಗುತ್ತಾ ಹೋಗುವನು. ಯಾವಾಗ ಎಂದರೆ ಮೇಲುಸಿರು ಹತ್ತಿದಾಗ. ಇಂತಹ ದೆಶೆಯಲ್ಲಿ ಜೀವಾತ್ಮನಿಗೆ ಭಾರವನ್ನು ಹೊತ್ತ ಶಕಟ(ಗಾಡಿಯು) ದೃಷ್ಟಾಂತವನ್ನು ಕೊಟ್ಟಿದೆ. ಹೊರಲಾರದ ಹೊರೆಯನ್ನು ಹೊತ್ತ ಗಾಡಿಯು ಗಾಡಿ ಹೊಡೆಯುವವನಿಂದ ಪ್ರೇರಿತ ವಾಗಿ ಹೇಗೆ ಕೂಗುತ್ತಾ ಹೋಗುವುದೋ ಹಾಗೆಯೇ ಜೀವಾತ್ಮನೂ ಕೂಗುತ್ತಾ ದೇಹವನ್ನು ಬಿಟ್ಟು ಹೋಗುವನೆಂದು ತಿಳಿಯಬೇಕು.

36(೧) ಲಿಂಗ ಶರೀರ ರೂಪವಾದ ಅಂತಃಕರಣದ ರೂಪವು ವಾಸನಾಮಯ, ಮತ್ತು ಮೂರ್ತ, ಅಮೂರ್ತವೆಂದು ಹೇಳುವ ಪಂಚಭೂತಗಳ ಸಂಸ್ಕಾರಗಳಿಂದಲೂ ಜೀವಾತ್ಮನ ಸಂಬಂಧದಿಂದಲೂ ಹುಟ್ಟಿದ್ದು, ವಿಚಿತ್ರವಾಗಿದೆ. ಪಟದಲ್ಲಿ ಬರೆದ ಚಿತ್ರಗಳಂತೆ ಅನೇಕ ರೂಪ ವಾಗಿದೆ. ಆ ವಾಸನೆಗಳು ಅನೇಕ ಬಗೆಯಾಗಿವೆಯೆಂಬುವನ್ನು ತಿಳಿ ಸಲು **ಮಾಹಾ ರಜನಂ ವಾಸಃ** ಎಂಬುದು ಉಪಮಾನ. ಅರಿಸಿನದಿಂದ ಬಣ್ಣ ಹಾಕಿದ ಬಟ್ಟೆ ಎಂಬುದು ಇದರ ಅರ್ಥ. ಶುಭ್ರವಾದ ಬಟ್ಟೆಯು ಅರಿಶಿನದಿಂದ ಅರಿಶಿನದ ಬಣ್ಣವಾಗುವುದು. ಹಾಗೆಯೇ ನಮ್ಮ ಅಂತಃ ಕರಣವು ಸ್ತ್ರೀ ಮುಂತಾದ ಭೋಗ ವಸ್ತುಗಳ ಸಂಪರ್ಕವಾದಾಗ ಆ ಭೋಗ ವಸ್ತುಗಳ ಆಕಾರವನ್ನು ಹೊಂದಿ ಆ ಸಂಸ್ಕಾರದಿಂದ ಅನುರಕ್ತ ವಾಗುವುದು- ಪುರುಷನೂ ಸ್ತ್ರೀಯಲ್ಲಿ ಅನುರಕ್ತನಾಗುವನು. ಈ ಚಿತ್ತಾನುರಾಗದಿಂದ ಇದೇ ರೀತಿ ಧನ ಕನಕ ವಸ್ತು ವಾಹನಾದಿಗಳಲ್ಲೂ ಅನುರಕ್ತವಾಗುವುದು.

37(೨) **ಪಾಂಡು ಅವಿಕವುಃ**–ಬಿಳಿಯ ಕಂಬಳಿ. **ಇದು ಹೇಗೆ**

...ಗಲೇ ಚಿಕ್ಕಗಿರುವುದೋ, ಹಾಗೆಯೇ ಮಾನವನ ಚಿತ್ತವು ... ವಾಸನೆಯಿಂದ ಕೂಡಿರುವುದು.

8(೭) **ಇಂದ್ರಗೋಪ.** ಅಂದರೆ ಮಳೆಗಾಲದಲ್ಲಿ ಕೆಂಪಾಗಿ ...ವ ಕ್ರಿಮಿ. ಅದರಂತೆ ಅತ್ಯಂತ ವಿಷಯಾನುರಾಗವುಳ್ಳವನ ...ವು ಬಹಳ ಮಿತಿಮೀರಿದ ವಿಷಯಾನುರಾಗ ವಾಸನೆಯಿಂದ ಕೂಡಿ ...ವುದು.

ಈ ರೀತಿಯಾಗಿ ಕೆಲವು ಜೀವರ ಚಿತ್ತದಲ್ಲಿ ಭೋಗ ವಸ್ತುಗಳ ...ರತಮ್ಯದಿಂದ ರಾಗವು ಹೆಚ್ಚು ಕಡಿಮೆಯಾಗಿರುವುದು. ಇನ್ನು ಕೆಲವು ಕಡೆ ಜೀವರ ಸತ್ವ-ರಜಸ್ಸು-ತಮಸ್ಸು ಎಂಬುವ ಗುಣಗಳ ತಾರ ...ಮ್ಯದಿಂದ ಹೆಚ್ಚು ಕಡಿಮೆಯಾಗುವುದು.

9(೮) **ಬಿಳಿಯ ಕಮಲ.** ಹುಟ್ಟಿನಿಂದಲೇ ಬೆಳ್ಳಗೆ ಇರುವುದು. ...ದರಂತೆ ಕೆಲವರ ಚಿತ್ತವು ಸತ್ವಗುಣಪ್ರಧಾನವಾಗಿದ್ದು ವಾಸನೆಗಳು ...ದ್ಧವಾಗಿರುವುವು. ಇಂತಹ ವಾಸನಾರೂಪವು ಒಬ್ಬರಿಗೆ ಇರುವುದು ...ರೂಪ. ಇವರು ಧಾರ್ಮಿಕ ಮಾರ್ಗದಲ್ಲೇ ನಡೆಯುವರು.

10(೯) **ಬೆಂಕಿಯ ಜ್ವಾಲೆಯು ಪ್ರಕಾಶವಾಗಿರುವುದು.** ...ಗೆಯೇ ಪುರುಷ ಚಿತ್ತದ ವಾಸನಾರೂಪವು ಜ್ಞಾನಪ್ರಕಾಶದಿಂದ ಕೂಡಿರುವುದು ಇಂತಹ ವಾಸನೆಯುಳ್ಳವರೇ ವಿದ್ಯಾವಂತರು, ಪಂಡಿತರು ಆಗುವರು.

11(೬) **ಮಿಂಚು ಹೇಗೆ ಒಂದೇ ಸಲ ಹೊಳೆಯುವುದೋ** ಹಾಗೆ ಕೆಲವರ ಚಿತ್ತದಲ್ಲಿ ಜ್ಞಾನಪ್ರಕಾಶವು ಹೆಚ್ಚಾಗಿ ಹೊಳೆದು ಎಲ್ಲಾ ...ಷಯವನ್ನೂ ಗ್ರಹಿಸಬಲ್ಲುದು. ಮಿಂಚು ಹೊಳೆದಾಗ ಅದರ ಬೆಳಕಿನಿಂದ ದಶದಿಕ್ಕುಗಳು, ಅದರಲ್ಲಿರುವ ವಸ್ತುಗಳೂ ಹೊಳೆಯುವುವು.

ಆದರಂತೆ ಬಹಳ ಪುಣ್ಯಶಾಲಿಯಾಗಿದ್ದ ಮಹಾತ್ಮನಿಗೆ ಒಂದೇ ಸಲಕ್ಕೆ ಸತ್ವಗುಣವು ಹೆಚ್ಚಾಗಿ ವೃದ್ಧಿ ಹೊಂದಿ ತತ್ವಜ್ಞಾನವು ಉಂಟಾಗುವುದು. ಅದರಿಂದ ಸರ್ವಜ್ಞನೂ ಆಗಬಹುದು.

ಈ ತರಹ ಜ್ಞಾನವು ಹಿರಣ್ಯಗರ್ಭನಿಗೆ ಮೊಟ್ಟಮೊದಲು ಆಗುವುದೆಂದು ಹೇಳಿದೆ. ಕೆಲವರು ಸಾಧಾರಣವಾಗಿ ಹುಟ್ಟಿನಲ್ಲೇ ಜ್ಞಾನಿಗಳಾಗುವರು ವೇದವ್ಯಾಸರಂತೆ. ಶುಕರಂತೆಯೂ ಅನಂತರವೂ ಉಪದೇಶವಾದೊಡನೆಯೇ ಒಂದೇ ಸಲ ತತ್ವಜ್ಞಾನದ ಬೆಳಕು ಬಿದ್ದು ಜ್ಞಾನಿಗಳಾಗುವರು. ಯಾರಿಂದಲೂ ಇಹದಲ್ಲಿ ಉಪದೇಶವಾಗದಿದ್ದರೂ ಜನ್ಮಾಂತರದ ಉತ್ತಮ ಸಂಸ್ಕೃತಿಯಿಂದ ವೇದಶಾಸ್ತ್ರಗಳ ಜ್ಞಾನ, ತತ್ವಜ್ಞಾನವನ್ನು ಒಂದೇ ಸಲ ಸಂಪಾದಿಸುವರು, ಶಂಕರಭಗವತ್ಪಾದರಂತೆ ಎಂದು ಅರಿಯಬೇಕು.

ಈ ರೀತಿಯಾಗಿ ಚಿತ್ತದ ವಾಸನೆಗಳು, ವಿಚಿತ್ರವಾಗಿಯೂ, ವಿವಿಧವಾಗಿಯೂ, ಉತ್ತಮ, ಮಧ್ಯಮ, ಅಧಮವಾಗಿಯೂ ಇರಬಲ್ಲವು ಎಂಬುದಕ್ಕೆ ಮೇಲ್ಕಂಡ ಉದಾಹರಣೆಗಳನ್ನು ವೇದವು ಕೊಟ್ಟಿದೆ.

## ೪೨. ರಜ್ಜು ಸರ್ಪ ದೃಷ್ಟಾಂತ. ಶುಕ್ತಿ ರಜತ ದೃಷ್ಟಾಂತ

ಸಂಜೆಯ ಹೊತ್ತಿಗೆ ಹಗ್ಗವನ್ನು ನೋಡಿ ಹಾವು ಎಂದು ಭ್ರಮೆ ಬರುವುದುಂಟು. ಮುತ್ತಿನ ಚಿಪ್ಪನ್ನು ನೋಡಿ ಹೊಳಪಿನಿಂದ ಬೆಳ್ಳಿಯೆಂಬ ಭ್ರಮೆಯು ಬರುವುದುಂಟು ಈ ಬಗೆಯ ದೃಷ್ಟಾಂತದಿಂದ ಪರಮಾತ್ಮನ ಸ್ವರೂಪ ತಿಳಿಯದಾಗ ಅಜ್ಞಾನದಿಂದ ಜಗತ್ತು ಸತ್ಯವಾಗಿರುವಂತೆ ಭ್ರಮೆಯು ಬರುವುದು. ಈ ಭ್ರಮೆಯು ಪರಮಾತ್ಮನ ಸಾಕ್ಷಾತ್ಕಾರದಿಂದ ಹೋಗುವುದು. ಇದು ಜ್ಞಾನಿಗಳ ಅನುಭವ. ಹೇಗೆ ಸರ್ಪ ಭ್ರಾಂತಿಯು ಹಗ್ಗದಲ್ಲಿ ಬಂದಿದ್ದರೂ ಅನಂತರ ದೀಪವನ್ನು ತಂದು ನೋಡಿದಾಗ ಹಗ್ಗವೇ. ಹಾವಿಲ್ಲ. ಹಾವು ಅಲ್ಲ- ಹಾವು ಮಿಥ್ಯೆ

... ಅರಿವು ಆಗುವುದು. ಅಜ್ಞಾನವಿರುವಾಗ ಸತ್ಯವಾಗಿದ್ದಂತೆ ... ಅದರಿಂದ ಭಯಕಂಪನಾದಿಗಳು ಹುಟ್ಟಿದರೂ ಜ್ಞಾನದಿಂದ ... ತತ್ತ್ವವು ತಿಳಿದ ಮೇಲೆ ಭ್ರಮೆಯೊಂದಿಗೆ ಇವುಗಳೂ ತೊಲಗು ... ಹಾಗೆಯೇ ಪ್ರಪಂಚ ಸತ್ಯವೆಂಬ ಭ್ರಮೆಯಿಂದ 'ಅಹಂ, ಮಮ' ... ಭ್ರಮೆಯು ಇಷ್ಟೇ ಇದ್ದು ನಮಗೆ ಸಂಸಾರದ ತಾಪತ್ರಯ ... ತಂದೊಡ್ಡಿರುವುದು. ಇದು ಹೋದರೆ ಈ ಸಂಸಾರದ ದುಃಖವು ... ಲಗುವುದು.

13. ಶುಕ್ತಿ ರಜತವನ್ನು ಸತ್ಯವಾಗಿತ್ತೆಂದು ತಿಳಿದಾಗ ಅದರ ... ಆಸೆ ಹೆಚ್ಚುವುದು. ಇದು ಬೆಳ್ಳಿಯಲ್ಲ ಎಂದು ತಿಳಿದ ಮೇಲೆ ... ಆಸೆಯು ಹೋಗುವುದು. ಅದರಂತೆ ಸಂಸಾರದ ವ್ಯಾಮೋಹ ... ಗದ್ವೇಷಾದಿಗಳೂ ಹೋಗುವುವು.

14. ಇದರಂತೆ **ಕನ್ನಡಿಯಲ್ಲಿ ಕಾಣುವ ನಗರದ ದೃಷ್ಟಾಂತ.** ... ನಗರವಿಲ್ಲದಿದ್ದರೂ ಕನ್ನಡಿಯಲ್ಲಿ ಪ್ರತಿಬಿಂಬಿಸಿದಾಗ ಕನ್ನಡಿ ... ನಗರ ನಿಜವಾಗಿರುವಂತೆ ಬಾಲಕರಿಗೆ ತೋರುವುದು. ಇದು ... ಕೆ ಮಾತ್ರವೆಂದು ಅರಿತಾಗ ಸತ್ಯವಲ್ಲವೆಂದು ತಿಳಿಯುವುದು. ... ಗೆಯೇ ಈ ಜಗತ್ತು ಅಜ್ಞಾನಿಗೆ ಸತ್ಯವಾಗಿರುವಂತೆ ತೋರುವುದು. ... ದ ಅರಿವು ಆದಾಗ ತೊಲಗುವುದು. ಇದನ್ನೇ ಶಂಕರರು ದಕ್ಷಿಣಾ ... ರ್ತಿ ಸ್ತೋತ್ರದಲ್ಲಿ **"ವಿಶ್ವಂದರ್ಪಣ ದೃಶ್ಯಮಾನ ನಗರೀ ತುಲ್ಯಂ ನಿಜಾನ್ತರ್ಗತಂ"** ಎಂದು ಉದಾಹರಿಸಿರುವರು.

15. ಈಶ್ವರನು ಜಗತ್ತನ್ನು ಸೃಷ್ಟಿಸಿದ ನಂತರ ಪ್ರಪಂಚದಲ್ಲಿ ಪ್ರವೇಶಿಸಿದನೆಂದು ವೇದಗಳು ಹೇಳುವುವು. ಈಶ್ವರನು ಸರ್ವವ್ಯಾಪಕ ... ಗಿರುವಾಗ ಪ್ರವೇಶವಾಗದ ಸ್ಥಳವೇ ನಿಜವಾಗಿಲ್ಲ. ಅದರಿಂದ ಪ್ರವೇಶವೆಂಬುದು ಗೃಹಸ್ಥನು ಗೃಹವನ್ನು ಕಟ್ಟಿ ಪ್ರವೇಶಿಸುವಂತೆ ... ಸರ್ಪವು ಜಲದಲ್ಲಿ ಪ್ರವೇಶಿಸುವಂತೆಯೂ ನಿಜವಾಗಿ ಅಲ್ಲ.

ಮಾತ್ರೇನೆಂದರೆ ಪ್ರವೇಶವಾದಂತೆ ತೋರಿಕೆ ಮಾತ್ರ. ಇದನ್ನು ತಿಳಿಸುವುದಕ್ಕೆ **ಮೂರು ದೃಷ್ಟಾಂತಗಳಿವೆ.**

**ಬೆಂಕಿ- ಸೂರ್ಯ, ಗಾಳಿ**

46(೧) ಬೆಂಕಿಯು ಕಟ್ಟಿಗೆಯಲ್ಲೂ, ಅರಣಿಯಲ್ಲೂ, ಭೂಗರ್ಭದಲ್ಲೂ,ಕಲ್ಲು ಮುಂತಾದ ಸ್ಥಳದಲ್ಲೂ ಬಿಡಿಬಿಡಿಯಾಗಿರುವಂತೆ ಕಾಣಿಸುವುದು.

47.(೨) ಹೊರಗೆ ಆಕಾಶದಲ್ಲಿದ್ದ ಸೂರ್ಯನು ಜಲಪಾತ್ರಗಳಲ್ಲಿ ಪ್ರವೇಶವಾಗಿರುವಂತೆ ತೋರಿದರೂ ಪ್ರತ್ಯೇಕವಾಗಿ ತೋರಿಬರುವನು.

48(೩) ಹಾಗೆಯೇ ಗಾಳಿಯು ಒಂದೇ ಆದರೂ ಆಕಾಶದಲ್ಲಿ, ಭೂಮಿಯಲ್ಲಿ, ಸಮುದ್ರ ಪ್ರದೇಶದಲ್ಲಿ, ಬೀಸಣಿಗೆಗಳಲ್ಲಿ ಬೀಸುವಾಗ ಬೇರ್ಪಟ್ಟು ತೋರುವುದು. ಅವುಗಳು ನಿಜವಾಗಿ ಪ್ರವೇಶ ಮಾಡದೆ ಇದ್ದರೂ ಪ್ರವೇಶ ಮಾಡಿರುವಂತೆ ಹೇಗೆ ತೋರುವುವೋ ಹಾಗೆಯೇ ಪರಮಾತ್ಮನು ತಾನು ಪ್ರವೇಶ ಮಾಡದಿದ್ದರೂ ಪ್ರವೇಶ ಮಾಡಿದವನಂತೆ ತೋರುವವನಾದ್ದರಿಂದ '**ತದೇವಾನು ಪ್ರಾವಿಶತ್**', '**ಆನಖಾಗ್ರಮಿಹಪ್ರವಿಷ್ಟಃ**' ಎಂದು ವೇದಗಳು ಪ್ರವೇಶಿಸಿದನೆಂದು ಹೇಳುವುದು. ಬುದ್ಧಿಯಲ್ಲಿ ಪ್ರತಿಬಿಂಬಿಸಿ "ಅಹಂ" ಎಂಬುದಾಗಿ ಜೀವನು ನಾನು ನೋಡುವೆನು, ಕೇಳುವೆನು, ಮನನ ಮಾಡುವೆನೆಂದು ವಿಶೇಷ ರೀತಿಯಲ್ಲಿ ಬಗೆಬಗೆಯಾಗಿ ತೋರಿಬರುವುದೇ ಪರಮಾತ್ಮನ ಪ್ರವೇಶವೆಂಬುದರ ಅರ್ಥವು. ಮೇಲ್ಕಂಡ ಉದಾಹರಣೆಗಳ ಭಾವಾರ್ಥವು.

49. ವಿಶೇಷ ರೀತಿಯಲ್ಲಿ ಬಿಡಿಬಿಡಿಯಾಗಿ ತೋರುವುದಕ್ಕೆ, **ಕ್ಷೌರದ ಕತ್ತಿಯ ದೃಷ್ಟಾಂತ**. ಅಂದರೆ ಕ್ಷೌರದ ಕತ್ತಿಗಳನ್ನು ಪೆಟ್ಟಿಗೆಯಲ್ಲಿ ಒಂದೊಂದು ಸ್ಥಾನದಲ್ಲೂ ಪ್ರತ್ಯೇಕವಾಗಿ ಇರಿಸಿದಾಗ ಅದು ಹೇಗೆ ಬೇರೆ ಬೇರೆಯಾಗಿ ತೋರುವುದೋ

...ಗಿರೋ ಚೈತನ್ಯರೂಪನಾದ ಆತ್ಮನು, ಚಕ್ಷು, ಶ್ರೋತ್ರ, ತ್ವಕ್ ... ಘ್ರಾಣವೆಂಬುವ ಪಂಚೇಂದ್ರಿಯ ಸ್ಥಾನಗಳಲ್ಲಿ, ಎಚ್ಚರವಾ... ನೋಡುವುದು, ಕೇಳುವುದು ಮುಟ್ಟಿ ತಿಳಿಯುವುದು, ರಸ ... ಸವಿಯುವುದು, ಗಂಧವನ್ನು ಸೇವಿಸುವುದು ಇತ್ಯಾದಿ ರೂಪದಲ್ಲಿ ...ರೀತಿಯಾಗಿ ತೋರಿಬರುವನು.

50. ಆತ್ಮನು ಸಾಮಾನ್ಯ ರೂಪದಲ್ಲಿಅಂದರೆ ಚೈತನ್ಯರೂಪದಲ್ಲಿ ... ಶರೀರಗಳಲ್ಲೂ ನಖ, ಶಿಖೆ, ಪರ್ಯಂತರ ವ್ಯಾಪಿಸಿ ತೋರು... ತಿಳಿಸಲು **ಅರಣಿಯ ಅಗ್ನಿ ದೃಷ್ಟಾಂತ.**

ಅರಣಿಯಲ್ಲಿ(ಶಮೀವೃಕ್ಷದ ತುಂಡಿನಲ್ಲಿ)ಎಲ್ಲೆಡೆ ಬೆಂಕಿಯು ವ್ಯಾಪಿ...ಗಿರೋ ಇರುವುದು. ಮಥನ ಮಾಡಿದ ಮೇಲೆ ಬೆಂಕಿಯು ಎದ್ದು ...ರುವುದು. ಮಥನ ಮಾಡುವ ಪೊದಲು ಈ ಕಾಷ್ಠದಲ್ಲಿ ವ್ಯಾಪಿ... ಬೆಂಕಿಯು ಉದಾಹರಣೆ ಎಚ್ಚರ, ಕನಸು. ಈ ಅವಸ್ಥೆಗಳು ...ಟ್ಟುವ ಮುಂಚೆ ಸುಷುಪ್ತಿಯಲ್ಲಿ ಗಾಢ ನಿದ್ರೆಯಲ್ಲಿ ಆತ್ಮಚೈತನ್ಯವು ...ಸ್ತ ಶರೀರದಲ್ಲಿ ಎಲ್ಲೆಡೆ ವ್ಯಾಪಿಸಿಯೇ ಇರುವುದು. ಇದೇ ಸಾಮಾನ್ಯ ...ರೂಪದಲ್ಲಿ ನಿತ್ಯ ಚೈತನ್ಯವು ವ್ಯಾಪಿಸುವ ಬಗೆ.

51. ಇದೇ ರೀತಿಯಾಗಿ ಸಾಮಾನ್ಯ ರೂಪದಲ್ಲಿ ಪ್ರವೇಶವಾಗಿದೆಯೆಂ...ಬುದನ್ನು ತಿಳಿಯಲು **ರಜ್ಜುಸರ್ಪ ದೃಷ್ಟಾಂತ,** ರಜ್ಜುವಿನಲ್ಲಿ ಭ್ರಮಿ...ಸಿದ್ದ ಸರ್ಪದಲ್ಲಿ ರಜ್ಜುವು ಹೇಗೆ ಸೇರಿ ಒಳಹೊಕ್ಕಿದೆಯೋ ಹಾಗೆಯೇ ಮತ್ತೊಂದು ಬಗೆಯಲ್ಲಿ ಆತ್ಮನಲ್ಲಿ ಕಲ್ಪಿತವಾದ ಈ ಜಗತ್ತಿನಲ್ಲಿ ಆತ್ಮನ ವ್ಯಾಪನೆಯಾಗಲಾರದು ಆತ್ಮತತ್ವವು ತಿಳಿಯದಿರುವಾಗ ಅಜ್ಞಾನದಿಂದ ತೋರಿಬರುವ ಜಗತ್ತಿನಲ್ಲಿ ತಾದಾತ್ಮ್ಯದಿಂದಲೇ ಚೈತನ್ಯವು ವ್ಯಾಪಿಸಿದೆ ಯೆಂದೇ ಹೇಳಬೇಕು.

ಅದರಿಂದಾಗಿ ಜಗತ್ತು ಸತ್ತಾಗಿ(ಸತ್ಯವಾಗಿ)ರುವಂತೆ ತೋರು ವುದು. ಸದ್ರೂಪದಿಂದ ಸಾಮಾನ್ಯವಾಗಿ ವ್ಯಾಪಿಸಿರುವಂತೆ ಚಿದ್ರೂಪ

ದಿಂದಲೂ ವ್ಯಾಪಿಸಿರುವುದು ಜಗತ್ತಿನ ಸತ್ತೆ, ಸ್ಫೂರ್ತಿ, ಆನಂದಗಳು ಬ್ರಹ್ಮಚೈತನ್ಯದ ವ್ಯಾಪನೆಯಿಂದ ಎಂದು ನಾವು ಅರಿಯಬೇಕು.

### 52. ರಾಹುಗ್ರಹಣದಿಂದ ಹಿಡಿಯಲ್ಪಟ್ಟ ಸೂರ್ಯಚಂದ್ರರ ದೃಷ್ಟಾಂತ.

ಪರಮಾತ್ಮನು ಮಾಯೆಯಿಂದ ಮುಚ್ಚಲ್ಪಟ್ಟು ತಿಳಿಯದಂತಾಗಿರುವನು. ಅದಕ್ಕೆ ಇದು ದೃಷ್ಟಾಂತ. ಗ್ರಹಣವಾದಾಗ ಪೂರ್ಣ ಗ್ರಾಸವಾಗಿದೆಯೆಂದು ಇಟ್ಟುಕೊಳ್ಳೋಣ. ಈ ಪೂರ್ಣಗ್ರಾಸವಾದಾಗ ಸೂರ್ಯ ಚಂದ್ರರು ಸ್ಪಷ್ಟವಾಗಿ ನೋಡುವವರಿಗೆ ಕಾಣಿಸುವುದಿಲ್ಲ. ಆದರೂ ಸೂರ್ಯಚಂದ್ರರ ಪ್ರಕಾಶವು ಹೋಗಿರುವುದಿಲ್ಲ. ಹಾಗೆಯೇ ಸಂಸಾರ ಪ್ರಪಂಚಕ್ಕೆ ಮೂಲಭೂತವಾದ ಮಾಯೆಯಿಂದ ಆವೃತವಾಗಿದ್ದು ಪರಮಾತ್ಮನು, ಇರುವಂತೆ ಕಾಣಿಸುವುದಿಲ್ಲ. ಆದರೆ ನಿತ್ಯ ಪ್ರಕಾಶಕ್ಕೆ ಚ್ಯುತಿಯಿಲ್ಲ. ಅದರ ಪ್ರಕಾಶವು ಇರುವುದರಿಂದಲೇ ಮಾಯೆಯೆಂಬುದೂ ಅದರ ಕಾರ್ಯವಾದ ಜಗತ್ತೂ ಕಾಣಿಸುತ್ತಿರುವುದು. ರಾಹುಗ್ರಸ್ತನಾದ ಸೂರ್ಯನ ಬೆಳಕಿನಿಂದಲೇ ಛಾಯಾರೂಪವಾದ ರಾಹುವು ನಮಗೆ ಕಾಣಿಸುವುದು.

ಅಜ್ಞಾನಿಗಳಾದ ನಮಗೆ ಸ್ವಯಂ ಪ್ರಕಾಶನಾದ ಪರಮಾತ್ಮನ ಬೆಳಕಿನಿಂದಲೇ 'ನಾನು' ಎಂಬುವ ಜೀವಾತ್ಮನೂ, 'ನನಗೆ' ತತ್ವವು ತಿಳಿಯದೆಂದು ಹೇಳುವ ಅಜ್ಞಾನವೂ, ಅದರ ಕಾರ್ಯವಾದ ಸಂಸಾರವೂ ತೋರುತ್ತಲಿರುವುದು.

**'ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ'** ಎಂದೂ **'ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜಂತವಃ'** ಎಂದು ಮೇಲಿನ ವಿಷಯಕ್ಕೆ ಉದಾಹರಣೆ (ಗೀತಾ)

ಮಾಯೆಯು ಮುಚ್ಚಿದೆಯೆಂಬುದಕ್ಕೆ ಶಂಕೆಯು ಅಥವಾ

ಘಟವು ದೀಪವನ್ನು ಮುಚ್ಚಿದೆ ಎಂದಂತೆ ಅಲ್ಲ. ಹಾಗೆ ಪರಮಾತ್ಮನನ್ನು ಅದು ಮುಚ್ಚಲಾರದು. ಮಾಯೆಯು ಪರಮಾತ್ಮನಿಗಿಂತ ಭಿನ್ನವು. ಅದು ಅವನಲ್ಲಿರುವ ಜಡ ಶಕ್ತಿ. ಅದಕ್ಕೆ ಸ್ವತಃ ಸತ್ತೆಯಾಗಲೀ ಅಸ್ತಿತ್ವವಾಗಲೀ ಇಲ್ಲ. ಅದು ನಮಗೆ ತಿಳಿಯದಂತೆ ಮಾಡುವ ಆವರಣ ಶಕ್ತಿಯುಳ್ಳದ್ದು. ಆದರಿಂದ ಅದು ಮುಚ್ಚಿದೆಯೆಂದು ಹೇಳುವುದು, ರಾಹು ದೃಷ್ಟಾಂತದಂತೆ – ಎಂಬುದನ್ನು ಇಲ್ಲಿ ಗಮನಿಸಬೇಕು. ಜ್ಞಾನಿಗಳಿಗೆ ಈ ಮಾಯೆಯೇ ಇರುವುದಿಲ್ಲ. ಮುಚ್ಚುವುದಿಲ್ಲ. ಪರಮಾತ್ಮನು ತನ್ನ ರೂಪದಲ್ಲೇ ಪೂರ್ಣವಾಗಿ ಕಾಣಿಸುವನು. ರಾಹುಗ್ರಹಣವಿಲ್ಲದ ಪ್ರದೇಶದಲ್ಲಿ ಸೂರ್ಯ ಚಂದ್ರರು ಸ್ಪಷ್ಟವಾಗಿಯೇ ಕಾಣಿಸುವರು. ಅಂದಂತೆ ಜ್ಞಾನಿಗಳ ಹೃದಯದಲ್ಲಿ ಪರಮಾತ್ಮನು ಸ್ಪಷ್ಟವಾಗಿ ಕಾಣಿಸುವನು.

## 50. ಮಣ್ಣಿನ ಆನೆಯ ದೃಷ್ಟಾಂತ

ಮಣ್ಣಿನ ಆನೆಯಲ್ಲಿ ಶಿಶುವಿಗೆ ಆನೆಯೆಂದು ಬರುವ ಭ್ರಮೆ – ಈ ದೃಷ್ಟಾಂತವನ್ನು ದೇಹಾದಿಗಳಲ್ಲಿ ಮಿಥ್ಯಾಭಿಮಾನವನ್ನು ಮಾಡಿಕೊಂಡಿರುವ ಬದ್ಧಜೀವರಿಗೆ ಹೋಲಿಸಿದೆ.

ಮಣ್ಣಿನ ಆನೆಯಲ್ಲಿ ಶಿಶುವಿಗೆ ನಿಜವಾದ ಆನೆಯೆಂಬ ಭ್ರಾಂತಿಯು ಬರುವುದು. ಆದರಿಂದ ಅದನ್ನು ನೋಡಿ ಆನಂದದಿಂದ ಶಿಶುವು ಹಿಗ್ಗುವುದು. ಕುಣಿದು ಕುಪ್ಪಳಿಸುವುದು. ಅದರಂತೆ ದೇಹಾದಿಗಳಲ್ಲಿ ಆತ್ಮವೆಂಬ ಭ್ರಮೆಯಿಂದ ಬದ್ಧಜೀವನು (ಅಜ್ಞಾನಿಯು) ಹೆಮ್ಮೆಯಿಂದ ಲೌಕಿಕ ವೈದಿಕ ವ್ಯವಹಾರಗಳಲ್ಲಿ ಓಡಾಡುವನು. ನಲಿದಾಡುವನು. ಕುಣಿದಾಡುವನು. ಸಂಸಾರದಲ್ಲಿ ಹೆಚ್ಚಿನ ಮಮತೆಯನ್ನು ಇಟ್ಟುಕೊಂಡಿರುವನು. ತನ್ನ ಹೆಂಡತಿ, ಮಕ್ಕಳು ಮರಿಗಳಲ್ಲಿ ತಾನು ಸಂಪಾದಿಸಿದ ಗೃಹ ಕ್ಷೇತ್ರಾದಿಗಳಲ್ಲಿ ಶಾಶ್ವತ ಭ್ರಮೆಯಿಂದ ಹಿಗ್ಗುವನು. ಕುಣಿದಾಡುವನು. ಸ್ವಲ್ಪ ಕುರೂಪವುಳ್ಳವನಾದರಂತೂ ತಾನೇ ಸುಂದರ

ಪುರುಷನೆಂದೂ, ಹಣ ಕಾಸುಗಳು ತುಂಬಿದಾಗ, ತಾನೇ ಧನಿಕ, ಐಶ್ವ ರ್ಯವಂತನೆಂದೂ ಮೆರೆಯುವನು. ಕುರೂಪಿಗಳನ್ನೂ ದರಿದ್ರರನ್ನೂ ಹೀಯಾಳಿಸುವನು.

**ಮೃತ್ಸ್ನೇಭಕೇ ಯಥೇಭತ್ವಂ ಶಿಶುರಧ್ಯಸ್ಯವಲ್ಗತಿ**
**ಅಧ್ಯಸ್ಯಾತ್ಮನಿ ದೇಹಾದೀನ್ ಮೂಢಸ್ತದ್ವತ್ ವಿಚೇಷ್ಟತೇ**
(ನೈ ೧-೫೯)

ಮಣ್ಣಿನ ಆನೆಯು ನಿಜವಾಗಿಲ್ಲ. ಅದು ಆನೆಯಂತೆಯಿರುವ ಬೊಂಬೆ ಮಾತ್ರ. ಪ್ರತಿಕೃತಿಯೆಂದು ತಿಳಿದ ಹಿರಿಯರು ಮೋಹಪಡು ವುದಿಲ್ಲವಷ್ಟೆ. ಅದರಂತೆ ಜ್ಞಾನಿಗಳು ದೇಹ ಇಂದ್ರಿಯಾದಿಗಳು ನಿಜ ವಾದ ಆತ್ಮವಲ್ಲವೆಂದು ತಿಳಿದು ಸಂಸಾರಿಗಳಂತೆ ತಮ್ಮದೇಹದಲ್ಲಿ ಅಹಂತೆ ಯನ್ನು ಬಿಡುವರು. ದೇಹಾದಿಗಳಲ್ಲೂ ಮೊದಲಿದ್ದ ವ್ಯಾಮೋಹವಿಲ್ಲದೆ ಪರಮಾತ್ಮನನ್ನೇ ನೇರವಾಗಿ ಕಾಣುತ್ತಾ ಆನಂದವಾಗಿರುವರು.

**ದೇಹಾದ್ಯನಾತ್ಮದೃಕ್ ತದ್ವತ್**
**ತತ್ಕ್ರಿಯಾಂ ವೀಕ್ಷತೇಽಪಿನ ||**

51. **ಸ್ಥಾಣು ಪುರುಷ ದೃಷ್ಟಾಂತ**

ಒಬ್ಬನು ಒಣಗಿದ ಒಂದು ಮೋಟು ಮರವನ್ನು ಕತ್ತಲಲ್ಲಿ ಕಂಡು ಕಳ್ಳನೆಂದು ತಿಳಿದು ಹೆದರಿ ಓಡಿಹೋಗುವನು. ಓಡಿಹೋಗುವುದು ಒಂದು ವ್ಯವಹಾರ. ಹಾಗೆಯೇ ಆತ್ಮನನ್ನು ಬುದ್ಧಿ ದೇಹಾದಿ ರೂಪದಲ್ಲಿ ಭ್ರಮಿಸಿದ ಆತ್ಮಾಭಿಮಾನಿಯು ಸರ್ವವ್ಯವಹಾರದಲ್ಲಿ ತೊಡಗುವನು.
(ನೈ-೧ ೬೦)

52. **ಸೂತ್ರೇ ಮಣಿಗಣಾ ಇವ ದೃಷ್ಟಾಂತ**

ದಾರದಲ್ಲಿ ಮಣಿಗಳು ಇರುತ್ತವೆ.

... ದಾರದಲ್ಲಿ ಪೋಣಿಸಿದ ಮಣಿಗಳು ದಾರದ ಆಧಾರದ ಮೇಲೆ ... ದಾರವು ತಪ್ಪಿದರೆ ಮಣಿಗಳು ಕೆಳಕ್ಕೆ ಉದುರಿ ಬೀಳು ...ಗೆಯೇ '**ವಾಯುವೇ ಸೂತ್ರ**'ಎಂದು ವೇದವು ಹೇಳುತ್ತದೆ. ... ಇಹಲೋಕದ ನಮ್ಮ ಶರೀರವೂ ಮತ್ತು ಪರಲೋಕದಲ್ಲಿ ... ಬರುವ ಶರೀರವೂ ಬ್ರಹ್ಮನಿಂದ ಆರಂಭಿಸಿ ಕ್ರಿಮಿಕೀಟಗಳ ...ತರವಿರುವ ಸಮಸ್ತ ಪ್ರಾಣಿಗಳೂ ನಿಂತಿವೆ. ಈ ವಾಯುವೆಂಬ ... ಸೂತ್ರವಿಲ್ಲದೆ, ಇದರ ಸಂಬಂಧವು ತಪ್ಪಿದರೆ, ದಾರವು ತಪ್ಪಿದರೆ ...ಗಳು ಉದುರಿ ಹೋಗುವಂತೆ ನಮ್ಮ ಶರೀರಗಳೂ, ಎಲ್ಲ ಪ್ರಾಣಿಗಳ ...ಗಳೂ ಕುಸಿದು ಬೀಳುವುವು. ಅಂಗಾಂಗಳು ಕುಸಿದು ಬೀಳುವುವು. ...ವಾಯುವು ಶರೀರವನ್ನೇ ಬಿಟ್ಟು ಮೇಲಕ್ಕೆ ಹೋದರೆ ಶರೀರವು ...ದಂತೆ ಶವವಾಗಿ ಬಿದ್ದು ಬಿಡುವುದು, ಅನುಭವದ ಮಾತು.

ಈ ಸೂತ್ರವೆಂದು ಹೇಳಲ್ಪಡುವ ವಾಯುವು ಆಕಾಶದಂತೆ ಸೂಕ್ಷ್ಮ ...ವದ್ದು ಮತ್ತು ಪೃಥಿವಿ ಮೊದಲಾದುವುಗಳನ್ನು ಹಿಡಿದು ನಿಲ್ಲಿಸಿಕೊಂ...ವುದು, 17 ಪದಾರ್ಥಗಳಿರುವ ಲಿಂಗಶರೀರವು ಸಮಸ್ತ ಪ್ರಾಣಿ...ಗಳ ಕರ್ಮ ವಾಸನೆಗಳ ಆಧಾರವಾಗಿರುವುದು, ಇದೇ ತತ್ವವು. ಇದು ...ರೂಪವಾಗಿಯೂ ಅನೇಕವಾಗಿಯೂ ಇರುವುದು. ಇದರ ಭೇದವೇ ...ಗೆಯುವುರುತ್ತುಗಳು ಸಮುದ್ರದ ತೆರೆಗಳಂತೆ ಆಕಾಶದಲ್ಲಿ ಏಳುವುವು ಇದೇ ವಾಯುತತ್ವ, ಸೂತ್ರಾತ್ಮವೆಂದು ಹೇಳಲ್ಪಡುವುದು. ಇದೇ ಸಕಲ ...ಗತ್ತಿಗೆ ಆಧಾರ. ಮಣಿಗಳಿಗೆ **ದಾರವಿರುವಂತೆ** ಎಂದು ಅರಿಯಬೇಕು

...ಚಾಲಕ ಮಾಯಾವಿಯು ದಾರುಯಂತ್ರವನ್ನು ತಿರುಗಿಸುವನು. ...ವನಂತೆ ಈಶ್ವರನು ಅಂತರ್ಯಾಮಿಯಾಗಿ ನಮ್ಮೊಳಗೇ ಇದ್ದು ...ಮ್ಮನ್ನು ಪ್ರವೃತ್ತಿ ಮಾರ್ಗದಲ್ಲಿ ಓಡಾಡಿಸುವನು.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।**
**ಭ್ರಾಮಯನ್ ಸರ್ವ ಭೂತಾನಿ ಯಂತ್ರಾ ರೂಢಾನಿ**
**ಮಾಯಯಾ ॥** (ಗೀತೆ)

ಈಶ್ವರನು ಸಮಸ್ತ ಪ್ರಾಣಿಗಳ ಹೃದಯ ದೇಶದಲ್ಲಿದ್ದು ಶರೀರ ಪಂಜರವೆಂಬ ಯಂತ್ರಗಳಲ್ಲಿ ಅಭಿಮಾನ ಮಾಡಿಕೊಂಡು ಕೂತಿರುವ ಜೀವರನ್ನು, ಶಾಸ್ತ್ರೋಕ್ತವಾದ ಕರ್ಮಗಳಲ್ಲೂ, ನಿಷಿದ್ಧ ಕರ್ಮಗಳಲ್ಲೂ ವಾಸನಾನುಸಾರವಾಗಿ ಪ್ರವರ್ತಿಸುವಂತೆ ಮಾಡುವನು, ಪ್ರೇರೇಪಿಸುವನು. ಇದಕ್ಕೆ ಮೇಲಿನ ದೃಷ್ಟಾಂತ. ಮರದ ಬೊಂಬೆಗಳನ್ನು ಯಂತ್ರಗಳ ಮೇಲೆ ಕೂರಿಸಿ ಚಾಲಕನು ರಹಸ್ಯವಾಗಿದ್ದು ಕೆಳಗೆ, ಮೇಲೆ, ಸುತ್ತುಬರಿಸುವನು. ಅವನಂತೆ ಈಶ್ವರನು ಅಂತರ್ಯಾಮಿಯಾಗಿದ್ದು ಅಸ್ವತಂತ್ರವಾದ ಜೀವರನ್ನು ನಿಯಮಿಸಿ ನಡೆಸುವನು.

## 54. ರಥನಾಭಿ - ರಥನೇಮಿ ಇವುಗಳು ಮತ್ತು ಅರಗಳು ದೃಷ್ಟಾಂತ.

ರಥನಾಭಿ ಎಂದರೆ ಗಾಡಿಯ ಅಚ್ಚಿನ ಮರದ ಗುಂಫ, ದಿಮ್ಮಿ. ರಥನೇಮಿ ಎಂದರೆ ಗಾಡಿಯ ಚಕ್ರದ ಪಟ್ಟಿ. ಈ ಎರಡರ ಆಧಾರದ ಮೇಲೆ ಅರಗಳು, ಚಕ್ರದ ಕೋಲುಗಳು ನಿಂತಿರುತ್ತವೆ. ಚಕ್ರದ ಪಟ್ಟಿಯಿಲ್ಲದಿದ್ದರೂ ಅಚ್ಚಿನ ಮರ (ದಿಮ್ಮಿ) ಯಿಲ್ಲದಿದ್ದರೂ ಈ ಕೋಲುಗಳು ನಿಲ್ಲಲಾರವು. ಅದರಂತೆ ಸರ್ವಾತ್ಮನಾದ ಪರಮಾತ್ಮನಲ್ಲಿ (ಬ್ರಹ್ಮಜ್ಞಾನಿಯ ಆತ್ಮನಲ್ಲಿ) ಚತುರ್ಮುಖ ಬ್ರಹ್ಮನಿಂದ ಆರಂಭಿಸಿ ಕ್ರಿಮಿ, ಕೀಟ ಪರ್ಯಂತರ ಇರುವ ಎಲ್ಲಾ ಪ್ರಾಣಿಗಳೂ, ಎಲ್ಲಾ ದೇವತೆಗಳೂ, ಸಮಸ್ತ ಭೂ ಮುಂತಾದ ಲೋಕಗಳೂ, ಪ್ರಾಣಿಗಳ ಸಕಲ ಇಂದ್ರಿಯಗಳೂ, ಪ್ರಾಣಗಳೂ, ಜಲದಲ್ಲಿ ಪ್ರತಿಬಿಂಬಿಸಿದ ಚಂದ್ರನಂತೆ ಅಂತಃಕರಣದಲ್ಲಿ ಪ್ರತಿಬಿಂಬಿಸಿದ ಸಮಸ್ತ ಜೀವರೂ, ಒಟ್ಟಿನಲ್ಲಿ ಅಜ್ಞಾನ ಕಲ್ಪಿತವಾದ ಎಲ್ಲ ಜಗತ್ತೂ ನೆಲೆ ನಿಂತಿದೆ. ಪರಬ್ರಹ್ಮವನ್ನು ಅರಿತವನು ಸರ್ವಾತ್ಮನು. ಅವನೇ ಪರಬ್ರಹ್ಮ. ಪರಮಾತ್ಮ. ಸಮಸ್ತ ಶರೀರೋಪಾಧಿಗಳಿಂದ ಕೂಡಿದ್ದು ಸರ್ವಾತ್ಮನಾಗುವನು. ಈತನನ್ನು ಬಿಟ್ಟು ಪ್ರಪಂಚವೆಂಬುದು ಪ್ರತ್ಯೇಕವಾಗಿ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಆದರಿಂದ ರಥನಾಭಿಯಂತೆ ಜಗತ್ತಿಗೆ ಪರಮಾತ್ಮನೇ ಆಧಾರವೆಂದು ಅರಿಯಬೇಕು.

(ಬೃ-೨-೧೫)

## [illegible]. ಪಕ್ಷಿ ಪುರಗಳ ದೃಷ್ಟಾಂತ

ಪರಮೇಶ್ವರನು ಪಂಚಭೂತಗಳ ಮೂಲಕ ಭೂ ಮೊದಲಾದ ಸಪ್ತ ಲೋಕಗಳನ್ನು ಸೃಷ್ಟಿಸಿ ಎರಡು ಕಾಲಿನ ಪುರಗಳನ್ನೂ, ನಾಲ್ಕು ಕಾಲಿನ ಪುರಗಳನ್ನೂ ಸೃಷ್ಟಿಸಿ ಪಕ್ಷಿಯಾಗಿ ಒಳಗೆ ಪ್ರವೇಶಿಸಿದನೆಂದು ಒಂದು ಮಂತ್ರದಲ್ಲಿ ಅಲಂಕಾರ ಶೈಲಿಯಲ್ಲಿ ವರ್ಣಿಸಿದೆ.

**ಪುರಶ್ಚಕ್ರೇದ್ವಿಪದಃ ಪುರಶ್ಚಕ್ರೇಚತುಷ್ಪದಃ |**
**ಪುರಃ ಸ ಪಕ್ಷೀಭೂತ್ವಾ ಪುರಃ ಪುರುಷ ಆವಿಶತ್ ||**

ಇದರಲ್ಲಿ ಎರಡು ಕಾಲಿನ ಪುರಗಳೆಂದರೆ ಮನುಷ್ಯ ಶರೀರಗಳು, ನಾಲ್ಕು ಕಾಲಿನ ಪುರಗಳೆಂದರೆ ಪಶುಗಳು, ಪಕ್ಷಿಯೆಂದರೆ ಹಿರಣ್ಯಗರ್ಭನೆಂದರ್ಥ. ಈಶ್ವರನು ಭೂವಾದಿ ಸಪ್ತಲೋಕಗಳನ್ನೂ ಮನುಷ್ಯ ಶರೀರ, ಪಶು ಶರೀರ ಮುಂತಾದುವುಗಳನ್ನೂ, ಸೃಷ್ಟಿಸುವಾಗ ಮೊದಲು ಹಿರಣ್ಯಗರ್ಭನಾಗಿ ತನ್ನನ್ನು ಪರಿವರ್ತಿಸಿಕೊಳ್ಳುತ್ತಾನೆ. ತಾನೇ ಹಿರಣ್ಯ ಗರ್ಭನಾಗಿದ್ದು ಇವುಗಳನ್ನು ಸೃಷ್ಟಿಸಿ ತಾನೇ ಇವುಗಳಲ್ಲಿ ಪ್ರವೇಶಿಸುವನು. ಪ್ರವೇಶಿಸಿದಂತೆ ತೋರುವನೆಂದು ಅಧ್ಯಾತ್ಮ ಶಾಸ್ತ್ರದ ಮಾರ್ಮಿಕವಾದ ಅರ್ಥ.

ಶರೀರಕ್ಕೆ ಪುರದ ಹೋಲಿಕೆಯನ್ನು 'ಪುರಮೇಕಾದಶದ್ವಾರಂ' ಎಂದು ಮಂತ್ರವೇ ತೋರಿಸಿ ಪುರ ಎಂದು ಕರೆಯುವುದು. 11 ದ್ವಾರಗಳೆಂದರೆ ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗಿನ ತೊಳ್ಳೆಗಳು, ಒಂದು ಬಾಯಿ, ಹೊಕ್ಕಳು, ಕೆಳಗಿನ ಗುದ, ಗುಹ್ಯ, ನೆತ್ತಿಯ ಮೇಲಿರುವ ಬ್ರಹ್ಮರಂಧ್ರ ಈ ವಿಧಗಳು. ಇವು ಒಟ್ಟು 11 ದ್ವಾರಗಳು ಪಟ್ಟಣಕ್ಕೆ ಪ್ರವೇಶ ದ್ವಾರಗಳು ಇರುವಂತೆ, ಇವೆ. 'ನವ ದ್ವಾರೇ ಪುರೇ ದೇಹೀ' ಎಂದು ಗೀತೆಯು ಕೊನೆಯ ಎರಡನ್ನು ಬಿಟ್ಟು ಒಂಭತ್ತು ಛಿದ್ರಗಳನ್ನು ಮಾತ್ರ ಇಟ್ಟು ನವದ್ವಾರಪುರವೆಂದು ಶರೀರವನ್ನು ಹೋಲಿಸಿ ಕರೆದಿದೆ.

## ೫೧. 'ದಶಮಸ್ತ್ವಮಸಿ' ಎಂಬುವ ದೃಷ್ಟಾಂತ

ಒಬ್ಬ ಗುರುವಿನ ಹತ್ತಿರ ಹತ್ತು ಜನ ಮೂರ್ಖ ಶಿಷ್ಯರಿದ್ದರಂತೆ. ಈ ಹತ್ತು ಜನರು ಒಂದು ದಿನ ಊರಿಗೆ ಹೋಗಬೇಕೆಂದು ಹೊರಟರು. ದಾರಿಯಲ್ಲಿ ಒಂದು ಘೋರಗರ್ಜನೆಯುತ್ತಿರುವ ನದಿ ಸಿಕ್ಕಿತು. ಇದನ್ನು ದಾಟಿಹೋಗಬೇಕೆಂದು ಯೋಚಿಸಿ, 'ಇದು ನಿದ್ದೆ ಹೋಗುವಾಗ ನಾವೆಲ್ಲರೂ ಒಟ್ಟಾಗಿ ದಾಟಿ ಹೋಗೋಣ. ಈಗ ಈ ನದಿ ಕೂಗುತ್ತಿದೆ, ಎಚ್ಚರವಾಗಿದೆ. ತಪ್ಪದು ಹೋಗೋಣವೆಂದು' ಕುಳಿತರು. ಇವರಲ್ಲಿ ಒಬ್ಬ ಪಂಕಿಯು ಕೊಳ್ಳಿಯನ್ನು ಹೊತ್ತಿಸಿ ರಾತ್ರಿಯಾದ ಕೂಡಲೆ ನದಿಯೊಳಗೆ ಅದ್ದಿದ. ಆಗ "ಚೊರಕ್" ಎಂದು ಶಬ್ದವಾಯಿತು. ಆಗ ಇವರು 'ನದಿಗೆ ಇನ್ನೂ ನಿದ್ದೆ ಬಂದಿಲ್ಲ', ಎಂದು ದಾಟಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಅದೇ ಅದ್ದಿದ ಕೊಳ್ಳಿಯನ್ನು ಪುನಃ ನದಿಯೊಳಗೆ ಅದ್ದಿದರು. ಆಗ ಶಬ್ದ ಮಾಡಲಿಲ್ಲ. ಇದರಿಂದ 'ಈಗ ನಿದ್ದೆ ಹೋಗಿದೆ. ನಾವು ಮೆಲ್ಲಗೆ ಒಬ್ಬರನ್ನೊಬ್ಬರು ಕೈಹಿಡಿದು ದಾಟಿ ಹೋಗೋಣವೆಂದು' ಮೆಲ್ಲನೆ ದಾಟಿದರು- ಅನಂತರವೂ ತಮ್ಮೆಲ್ಲರನ್ನೂ ಲೆಕ್ಕ ಹಾಕಿ ಪರೀಕ್ಷಿಸಿಕೊಂಡರು. ಎಲ್ಲರೂ ದಾಟಿ ಬಂದೆವೇ? ಇಲ್ಲವೇ? ಎಂದು ನೋಡಿದರು. ಎಲ್ಲರೂ ಲೆಕ್ಕ ಮಾಡಿದಾಗ ತಮ್ಮನ್ನು ಬಿಟ್ಟು ಲೆಕ್ಕಮಾಡಿದ್ದರಿಂದ ಒಂಭತ್ತೇ ಜನರಿದ್ದೇವೆ. ಒಬ್ಬ ಇಲ್ಲ. ಎಲ್ಲಿಯೋ ದಾಟುವಾಗ ನದಿಯು ನುಂಗಿರಬೇಕೆಂದು ಅವಸಿಗಾಗಿ ತಲೆ ಮೇಲೆ ಕೈಯಿಟ್ಟುಕೊಂಡು ಬೆಳಗಾಗುವವರೆಗೂ ಅತ್ತರು, ಆ ಹೊತ್ತಿಗೆ ಪ್ರಯಾಣಿಕನೊಬ್ಬನು ಅದೇ ದಾರಿಯಲ್ಲಿ ಬಂದನು. ಎಲ್ಲರೂ ಅಳುತ್ತಿರುವುದನ್ನು ನೋಡಿ ಕನಿಕರದಿಂದ ಕೇಳಿದನು. 'ಏತಕ್ಕಾಗಿ ನೀವು ಅಳುತ್ತಿದ್ದೀರಿ? ಹೇಳಿ', ಎಂದು. ಅದಕ್ಕೆ ಆ ಶಿಷ್ಯರು, 'ನಾವು ಹತ್ತು ಜನ ಊರಿಗೆ ಹೊರಟಿದ್ದೆವು. ನಮ್ಮಲ್ಲಿ ಈಗ ಒಬ್ಬ ಹೊಳೆಯಲ್ಲಿ ಬಿದ್ದುಹೋಗಿದ್ದಾನೆ. ಈ ನದಿಯೇ ನುಂಗಿದೆ' ಎಂದು ತಮ್ಮ ಕಷ್ಟವನ್ನು ಹೇಳಿಕೊಂಡರು. ಪ್ರಯಾಣಿಕನು ನೋಡಿ ಲೆಕ್ಕಮಾಡಿ ಹತ್ತು ಜನ ಇರುವುದನ್ನು ತಿಳಿದು ಅವರನ್ನು ಸಾಲಾಗಿ ನಿಲ್ಲಿಸಿ ಲೆಕ್ಕ ಮಾಡಿದನು. 'ಏಕಃ, ದ್ವಿತೀಯಃ

[illegible] ಚತುರ್ಥಃ ಪಂಚಮಃ ಸಪ್ತಮಃ ಅಷ್ಟಮಃ ನವಮಃ [illegible] ತ್ವಂ ಅಸಿ' ಹೀಗೆ ಒಬ್ಬ, ಇಬ್ಬ. ಇತ್ಯಾದಿಯಾಗಿ ಲೆಕ್ಕ ಮಾಡಿ [illegible] ನೀನೇ ಹತ್ತನೆಯವನು ಎಂದು ಪ್ರತಿಯೊಬ್ಬರಿಗೂ ಪ್ರತ್ಯಕ್ಷ [illegible] ತೋರಿಸಿದನು. ಅಲ್ಲಿಗೆ ಹತ್ತನೆಯವನು ಪತ್ತೆಯಾದನೆಂದು ಅವರು [illegible] ಸಂತಸಪಟ್ಟರು. ಕಳೆದುಹೋದವನನ್ನು ಹುಡುಕಿ ಪತ್ತೆ ಮಾಡಿ [illegible] ವನನ್ನು ಹೊಗಳಿದರು.

ಈ ಕಥೆಯಲ್ಲಿ 'ಹತ್ತನೆಯವನು' ಇದ್ದರೂ ಇದ್ದಾನೆಂಬುದನ್ನು [illegible] ಅಜ್ಞಾನದಿಂದ ಕಳೆದುಹೋದನೆಂದು ದುಃಖಿತರಾಗಿದ್ದರು. [illegible] ತಮ್ಮಲ್ಲೇ ಇದ್ದಾನೆಂದು ತಿಳಿದ ಮೇಲೆ ದುಃಖವನ್ನು [illegible] ಆನಂದಪಟ್ಟರು ಎಂಬುದೇ ಸಾರಾಂಶ. ಇದರಂತೆ ಅಜ್ಞಾನಿ [illegible] ದವನು ಆತ್ಮ ತತ್ತ್ವವನ್ನು ಅರಿಯದಿರುವಾಗ ತನ್ನ ನಿಜ ಸ್ವರೂಪಕ್ಕೆ [illegible] ಯಾಗಿಯೇ ಪರಬ್ರಹ್ಮ, ಪರಮಾತ್ಮನೆಂಬುವನು ಇರುವನೆಂದು [illegible] ಶ್ವರರಲ್ಲಿ ಭೇದ ಬುದ್ಧಿ ಮಾಡಿಕೊಂಡು, ಆತ್ಮವಲ್ಲದ ದೇಹಾದಿ [illegible] ಆತ್ಮ ಭ್ರಮೆಯನ್ನು ಮಾಡಿಕೊಂಡು ಪದೇ ಪದೇ ಜನನ ಮರಣಾ [illegible] ನ್ನು ಅನುಭವಿಸುತ್ತಾ ಅನಾದಿಯಾಗಿ ಅನಂತ ಸಂಸಾರ ದುಃಖ [illegible] ಗೆ ಒಳಗಾಗುವನು. ಪೂರ್ವ ಜನ್ಮದ ಪುಣ್ಯಗಳ ಪರಿಪಾಕದಿಂದ [illegible] ಜ್ಞಾನಿಯಾದ ಗುರುವು ಲಭಿಸಿ, ಆ ಗುರುವಿನ 'ತತ್ತ್ವಮಸಿ' ಉಪದೇಶ [illegible] ದ ಈ ಸಂಸಾರಿಯು 'ನೀನೇ ಪರಬ್ರಹ್ಮನಾಗಿದ್ದಿ. ನೀನು ಸಂಸಾರಿ [illegible] ಲ್ಲ' ಎಂದು ಬೋಧಿಸಿದ ಉಪದೇಶದಿಂದ, ಈತನು 'ನಾನು ಸಂಸಾರಿ [illegible] ಲ್ಲ, ನಾನು ಕರ್ತನಲ್ಲ ಭೋಕ್ತೃವಲ್ಲ – ಸಂಸಾರವೇ ಇಲ್ಲದ ಶುದ್ಧ ಸಚ್ಚಿದಾನಂದ ರೂಪನಾದ ಪರಬ್ರಹ್ಮನೇ ನಾನೆಂದು' ತನ್ನ ನಿಜ ಸ್ವರೂಪವನ್ನು ಸಾಕ್ಷಾತ್ ತಿಳಿದು, ಸಂಸಾರದ ದುಃಖಕ್ಕೆ ಕಾರಣವಾದ ಅಜ್ಞಾನವನ್ನು ತೊಡೆದುಹಾಕಿ. ಅಖಂಡ ಪರಿಪೂರ್ಣನಾದ ಆನಂದರೂಪ [illegible] ಗಿರುವನು. ಪರಬ್ರಹ್ಮವು ತಿಳಿಯದಿರುವಾಗ ತನಗೆ ಬೇರೆಯಾಗಿ ಅದು ಎಲ್ಲಿಯೋ ಇತ್ತೇನೋ. ಜ್ಞಾನವು ಬಂದ ನಂತರ ಪುನಃ ಪಡೆದುಕೊಂಡ

ನೆಂದೂ ತಿಳಿಯುವನು. 'ದಶಮಸ್ತ್ವಮಸಿ' ಎಂಬ ಆಪ್ತೋಪದೇಶ ಹತ್ತನೆಯವನು (ತಾನೇ) ಪತ್ತೆಯಾದನೆಂದು ತಿಳಿದಂತಾಗಿದೆ.

## 57. ಶಕುನಿ ದೃಷ್ಟಾಂತ

ಶಕುನಿ ಎಂದರೆ ಹಕ್ಕಿ. ಪಂಜರದಲ್ಲಿದ್ದ ಹಕ್ಕಿಯೊಂದು, ಅದರ ಕಾಲಿಗೆ ಉದ್ದವಾದ ದಾರವನ್ನು ಕಟ್ಟಿ ಪಂಜರದಿಂದ ಹೊರಗೆ ಬಿಟ್ಟಾಗ ಆ ಹಕ್ಕಿಯು ದಶದಿಕ್ಕುಗಳಲ್ಲೂ ಸುತ್ತಿ ಸುತ್ತಿ, ಸೋತು ಅನಂತರ ಬೇರೆ ಒಂದು ಗೂಡು ತನಗೆ ಸಿಕ್ಕದೆ ಪುನಃ ತಾನು ಮೊದಲಿದ್ದ ಪಂಜರದೊಳಗೆ ಬಂದು ಸೇರಿ ವಿಶ್ರಾಂತಿ ಹೊಂದುವ ಹಾಗೆ ಜೀವಾತ್ಮನು ತನ್ನ ಉಪಾಧಿಯಾದ ಮನಸ್ಸಿನ ಮೂಲಕ ಜಾಗರ ಮತ್ತು ಸ್ವಪ್ನಾವಸ್ಥೆಗಳಲ್ಲಿ ಹಲವಾರು ವಿಷಯ ದೇಶಗಳಲ್ಲಿ ಓಡಾಟವಮಾಡಿ ಸುತ್ತಿಸುತ್ತಿ, ಬೇಸತ್ತು ತಾನು ಮೊದಲು ಎಲ್ಲಿಂದ ಹೊರಟು ಬಂದಿದ್ದನೋ ಅದೇ ಪರಬ್ರಹ್ಮನಲ್ಲಿ ವಿಶ್ರಾಂತಿಗಾಗಿ ಸುಷುಪ್ತಿ ಕಾಲದಲ್ಲಿ ಬಂದು ಸೇರುವನು. ಜೀವಾತ್ಮನಿಗೆ ಪ್ರಾಜ್ಞನೆಂಬುವ ಪರ ಮಾತ್ಮನೇ ಆಧಾರ, ಆಶ್ರಯ. ಅವನನ್ನು ಬಿಟ್ಟು ಮತ್ತೊಂದು ಆಶ್ರಯವಿಲ್ಲ. ಪ್ರಳಯದಲ್ಲೂ ಜೀವರಿಗೆ ಆಶ್ರಯ ಪರಬ್ರಹ್ಮವೇ ಎಂಬು ದನ್ನು ಅರಿಯಬೇಕು.

## 58. ಮಧುವಿನ ದೃಷ್ಟಾಂತ

ದುಂಬಿಗಳು ವಸಂತ ಕಾಲದಲ್ಲಿ ನಾನಾ ಹೂವುಗಳ ಮಕರಂದವನ್ನು (ರಸವನ್ನು) ಕುಡಿದು ತಂದು ಜೇನುತುಪ್ಪವನ್ನು ತಯಾರಿಸುತ್ತವೆ ಯಷ್ಟೆ. ಜೇನುತುಪ್ಪ ಅಥವಾ ಹನಿಯೆಂದು ಮಧುವೆಂಬುದರ ಅರ್ಥ. ಅನೇಕ ಪುಷ್ಪರಸಗಳು ಹನಿಯಲ್ಲಿ ಏಕವಾಗಿ ಸೇರಿಕೊಂಡ ನಂತರ ಆ ಹನಿಯಲ್ಲಿ ಇಂತಹ ಹೂವಿನ ರಸ, ಇದು ಮಾವಿನ ಹೂವಿನ ರಸ, ಇದು ಮಲ್ಲಿಗೆ ಹೂವಿನ ರಸ, ಇದು ಹಲಸಿನ ಹೂವಿನ ರಸ, ಎಂದು ಹೇಗೆ ಅವನ್ನು ಗುರುತು ಹಿಡಿಯಲು ಅಸಾಧ್ಯವೋ ಹಾಗೆಯೇ ಸುಷುಪ್ತಿ

... ಎಲ್ಲಾ ಜೀವರೂ ಪರಬ್ರಹ್ಮನಲ್ಲಿ ಲೀನವಾಗಿ ಏಕವಾಗಿರು ... ನಾವು ಇಲ್ಲಿ ಏಕವಾಗಿದ್ದೇವೆ ಎಂಬುದನ್ನು ಪ್ರತ್ಯೇಕ ಗುರುತು ...ಲು ಅಸಮರ್ಥರಾಗಿರುತ್ತಾರೆ.

59 ಹಾಗೆಯೇ **ನದಿಗಳ ದೃಷ್ಟಾಂತ**

ಪರ್ವತ ಮೂಲದಿಂದ ಹೊರಟ ಕೆಲವು ಪೂರ್ವ ಪಶ್ಚಿಮ ನದಿಗಳು ...ಮುದ್ರಕ್ಕೆ ಹೋಗಿ ಸೇರಿಕೊಂಡ ನಂತರ ಎಲ್ಲವೂ ಸಮುದ್ರವೇ ಆಗಿ ...ವು. ಆಗ, ನಾನು ಗಂಗೆ, ನಾನು ಯಮುನೆ, ನಾನು ಗೋದಾ... ನಾನು ಕೃಷ್ಣಾ ನದಿಯೆಂದು ನದಿಗಳು ಪ್ರತ್ಯೇಕ ಗುರುತಿಸಲಾ... ನಾವೂ ಸಹ ಸಮುದ್ರದಲ್ಲಿ ಏಕವಾದಾಗ ಈ ನದಿಗಳನ್ನು ಪ್ರತ್ಯೇಕ ಗುರುತಿಸಲಾರೆವು. ಅವುಗಳಂತೆ ಎಲ್ಲಾ ಜೀವರೂ ಸುಷುಪ್ತಿಯಲ್ಲೂ, ...ಯದಲ್ಲೂ, ಪರಬ್ರಹ್ಮನಲ್ಲಿ ಲೀನವಾಗಿದ್ದಾಗ ತಮ್ಮನ್ನು ...ವು ಪ್ರತ್ಯೇಕ ಗುರುತಿಸಲಾರರು. ಹಾಗೂ ಎಚ್ಚರವಾದ ಮೇಲೂ ಪರಬ್ರಹ್ಮವಸ್ತುವಿನಿಂದ ಹೊರಗೆ ಬಂದ ಮೇಲೂ, ತಾವು ...ಬ್ರಹ್ಮನಿಂದ ಎದ್ದು ಬಂದಿರುತ್ತೇವೆ ಎಂಬುವನ್ನು ಗುರುತಿಸಲಾರರು. ಹಾಗೂ ಪ್ರಳಯ ಕಾಲದಲ್ಲಿ ಪರಬ್ರಹ್ಮನಲ್ಲಿ ಲೀನವಾದ ಜೀವರು ಪುನಃ ಸೃಷ್ಟಿಯಾದಾಗ ಪರಬ್ರಹ್ಮನಿಂದ ಎದ್ದು ಬಂದಿದ್ದೇವೆ ಎಂದು ಯಾರೂ ತಿಳಿಯುವುದಿಲ್ಲ. ತಿಳಿಯಲಾರರು, ತತ್ತ್ವಜ್ಞಾನವನ್ನು ಹೊಂದದೆ ಕೆಲವು ಕಾಲ ಮಾತ್ರ ಪರಬ್ರಹ್ಮನಲ್ಲಿ ಏಕವಾಗುವುದೇ ಇದಕ್ಕೆ ಕಾರಣ. ಪುನಃ ಎದ್ದು ಈ ಪ್ರಪಂಚ ವ್ಯವಹಾರಕ್ಕೆ ಬರಲು ಅವರವರ ಅಜ್ಞಾನವು ಉಳಿದಿರುವುದೇ ಮುಖ್ಯ ಕಾರಣವೆಂದು ಅರಿಯಬೇಕು.

60. ಜೀವ ಸಂಬಂಧವು ತಪ್ಪಿದಾಗ ಈ ಶರೀರವು ಸತ್ತು ಬೀಳುವುದು. ಆದರೆ ಜೀವ ಸಾಯುವುದಿಲ್ಲ ಎಂಬುವನ್ನು ತಿಳಿಯಲು **ಒಂದು ವೃಕ್ಷದ ದೃಷ್ಟಾಂತ.** ದೊಡ್ಡ ವೃಕ್ಷವೊಂದಿದೆ. ಈ ಮರದ ಬುಡಕ್ಕೆ

ಒಬ್ಬ ಕೊಡಲಿಯಿಂದ ಹೊಡೆದರೆ ಅಷ್ಟಕ್ಕೆ ಮರವು ಸಾಯುವುದಿಲ್ಲ. ಬದುಕಿರುವುದು. ಆದರೆ ಪೆಟ್ಟು ಬಿದ್ದ ಜಾಗದಲ್ಲಿ ರಸವು ಸುರಿಯುವುದು. ಮತ್ತೊಬ್ಬನು ಬಂದು ಮರದ ಮಧ್ಯಕ್ಕೆ ಕೊಡಲಿಯಿಂದ ಹೊಡೆದರೂ ಸಾಯುವುದಿಲ್ಲ. ಬದುಕಿಯೇ ಇರುವುದು. ಆ ಸ್ಥಳದಲ್ಲಿ ರಸವು ಸುರಿಯುವುದು. ಹೀಗೆ ಮರದ ಮೇಲಕ್ಕೆ ಹೊಡೆದರೆ ಆಗಲೂ ಸಾಯದೆ ಆ ಸ್ಥಳದಲ್ಲಿ ರಸವು ಸುರಿಯುವುದು. ಆದರೆ ಅದಕ್ಕೆ ಬದಲು ಒಳಗೆ ಜೀವ ಇದ್ದು ಬೇರಿನಿಂದ ಮತ್ತಷ್ಟು ನೀರನ್ನು ಕುಡಿದು, ಭೂಮಿಯ ಸಾರವನ್ನು ಬೇರಿನ ಮೂಲಕ ಸೆಳೆದುಕೊಂಡು ಆನಂದವಾಗಿ ಪುನಃ ಚಿಗುರಿ, ನಲಿದಾಡುವುದು. ಅದರ ಒಂದೊಂದು ಕೊಂಬೆ ಮುರಿದು ಬಿದ್ದರೂ ಜೀವ ಸಂಬಂಧವು ತಪ್ಪಿದ್ದ ಕೊಂಬೆ ಮಾತ್ರ ಒಣಗಿಹೋಗುವುದು, ಒಣ ಕಟ್ಟಿಗೆಯಾಗುವುದು. ಏಕೆಂದರೆ ಜೀವವಿದ್ದಾಗ ರಸವು ಹೊರಡುವುದು. ಜೀವ ಸಂಬಂಧವು ತಪ್ಪಿಹೋದರೆ ಇಡೀ ಮರವು ಒಣಗಿ ಸತ್ತು ಬೀಳುವುದು, ಎಂಬುವಂತೆ ವಾಕ್ಕು, ಮನಸ್ಸು, ಪ್ರಾಣಮುಂತಾದ ಇಂದ್ರಿಯಗಳ ಸಮುದಾಯದೊಂದಿಗೆ ಶರೀರದಲ್ಲಿ ಜೀವಾತ್ಮನು ಪ್ರವೇಶವಾಗುವನು, ಇದೂ ಸಹ ಕರ್ಮಾನುಸಾರ.

ಆ ವೃಕ್ಷದಂತೆ ಜೀವ ಸಂಬಂಧವು ತಪ್ಪಿಹೋದಾಗ, ಕೈಕಾಲುಗಳು ಕತ್ತರಿಸಿ ಹೋದರೂ ಶರೀರವು ಜೀವವಿರುವವರೆಗೂ ಸಾಯುವುದಿಲ್ಲ. ಜೀವ ಸಂಬಂಧವು ಪೂರ್ಣ ಶರೀರದಲ್ಲೇ ತಪ್ಪಿಹೋದರೆ ಶರೀರವು ಸತ್ತು ಶವವಾಗುವುದು. ಜೀವಾತ್ಮನು ಸಾಯುವುದಿಲ್ಲ. ಇದ್ದೇ ಇರುವನು. ಏಕೆಂದರೆ ಜೀವಾತ್ಮನು ದೇಹೇಂದ್ರಿಯಗಳಿಂದ ಬೇರ್ಪಟ್ಟಿರುವವನು. ನಿಜವಾಗಿ ಹುಟ್ಟದೇ ಇರುವವನು. ಆದರಿಂದ ಸಾಯುವುದಿಲ್ಲ.

**'ನ ಜಾಯತೇ ಮ್ರಿಯತೇವಾ ಕದಾಚಿತ್, ನಾಯಂಭೂತ್ವಾ ಭವಿತಾವಾ ನಭೂಯಃ।**

ಹಿಂದಿನ ದಿನ ಮಲಗಿ ಎದ್ದ ಮನುಷ್ಯನು ಹಿಂದಿನ ದಿನದ ಕರ್ತವ್ಯ ಕಾರ್ಯಶೇಷವನ್ನು ಜ್ಞಾಪಕ ಮಾಡಿಕೊಂಡು ಆ ಕಾರ್ಯದಲ್ಲಿ ಮುಂದುವರೆಯುವನು. ಅದರಂತೆ ಈ ಜನ್ಮವನ್ನು ಬಿಟ್ಟರೆ ಜನ್ಮಾಂತರದಲ್ಲಿ ಬೇರೆದೇಹವನ್ನು ಹಿಡಿಯುವನು. ನೆನಪು ಮಾಡಿಕೊಂಡೇ ಮುಂದು

...ರಿಯುವನು. ಅದರಂತೆ ಈಗ ಹೊಸದಾಗಿ ಹುಟ್ಟಿದ ಶಿಶುವಿಗೆ, ...ಲಾಸೆ. ಅಂದರೆ ತಾಯಿಯು ಎದೆಹಾಲನ್ನು ಕುಡಿಯುವ ...ಷೆ ಮತ್ತು ಭಯ, ಕಂಪಾದಿಗಳು ಕಳೆದ ಜನ್ಮಾಂತರದ ಸಂಸ್ಕಾ... ...ದ ನೆನಪಿಗೆ ಬರುವುವು. ಅದರಿಂದಲೂ, ಇಹಜನ್ಮದಲ್ಲಿ ಅಭ್ಯಾಸ ...ದ ಕೆಲವು ಕಲೆಗಳೂ ಸಹ ಬಾಲ್ಯದಲ್ಲೇ ಕೆಲವರಿಗೆ ಪರಿಚಿತವಾಗು ...ವು. ಇದರಿಂದ ಜನ್ಮಾಂತರವನ್ನು ಎತ್ತಿದ ಜೀವನು ಈ ಜನ್ಮಕ್ಕೂ ...ವನು. ಅದರಿಂದ ಜೀವಾತ್ಮನು ಎಂದಿಗೂ ಸಾಯುವುದಿಲ್ಲ, ಸ್ಥಿರ ...ನು ಅರಿಯಬೇಕು. ಇದೇ ಸಾಕ್ಷಿ.

61. ಹೀಗೆಯೇ ಜೀವಾತ್ಮನು ಹಳೆಯ ಜೀರ್ಣಶರೀರವನ್ನು ಬಿಟ್ಟು ...ತ್ತೊಂದು ಹೊ... ಶರೀರವನ್ನು ಪಡೆಯುತ್ತಾನೆಂಬುದಕ್ಕೆ ಹಳೆಯ ...ಟ್ಟೆಯನ್ನು ಬಿಟ್ಟು **ಹೊಸ ಹೊಸ ಬಟ್ಟೆಗಳನ್ನು ಧರಿಸುವವನ ದೃಷ್ಟಾಂತ.**

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ**
**ಸಂಯಾತಿ ನವಾನಿ ದೇಹೀ ॥** (ಗೀತೆ)

ಹಳೆಯ ಬಟ್ಟೆಗಳನ್ನು ಬಿಡುವಾಗಲೂ, ಹೊಸ ಬಟ್ಟೆಯನ್ನು ಧರಿಸುವಾಗಲೂ ಮನುಷ್ಯನು ಒಬ್ಬನೇ, ಬದಲಾಗುವುದಿಲ್ಲ. ಹೀಗೆಯೇ ಆಧಿವ್ಯಾಧಿಗಳಿಂದ ಜೀರ್ಣವಾದ ಶರೀರವನ್ನು ಬಿಟ್ಟು ಪುನಃ ಬೇರೆ ಹೊಸ ದೇಹವನ್ನು ಹೊಂದುವಾಗ ಜೀವಾತ್ಮನು ಸ್ಥಿರವಾಗಿಯೇ ಇರುವನು. ಸಾಯುವುದಿಲ್ಲ.

**'ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ'** ಎಂದು ಗೀತೆಯಲ್ಲಿ ಆತ್ಮನ ನಿತ್ಯತ್ವವನ್ನು ಸಮರ್ಥಿಸಿದೆ.

62. ಈಶ್ವರನು ಸನ್ನಿಧಿ ಮಾತ್ರದಿಂದ ಪ್ರೇರಕನಾಗುವನು ಎಂಬು ದಕ್ಕೆ **ಅಯಸ್ಕಾಂತ ದೃಷ್ಟಾಂತ**

ಅಯಸ್ಕಾಂತ ಎಂದರೆ ಸೂಜಿಗಲ್ಲು. ಇದು ಇದ್ದ ಜಾಗದಲ್ಲೇ ಅಲ್ಲಾಡದೆ ಇದ್ದು ತನ್ನ ಎದುರಿಗೆ ಇರುವ ಕಬ್ಬಿಣವನ್ನು ಎಳೆದು ಚಲಿಸು ವಂತೆ ಮಾಡುವುದು. ಅದರಂತೆಯೇ ಈಶ್ವರನು ಕೂಟಸ್ಥ (ನಿರ್ವಿ ಕಾರ) ನಾಗಿದ್ದರೂ, ಅಲ್ಲಾಡದೆ ಇದ್ದರೂ, ತನ್ನ ದೃಷ್ಟಿಗೆ ಬಿದ್ದ ಎಲ್ಲಾ ಜಡಪ್ರಪಂಚವನ್ನು ಚಲಿಸುವಂತೆ ಮಾಡುವನು. ಜೀವರಿಗೆ ಅಂತರ್ಯಾಮಿ ಯಾಗಿದ್ದು ಆಯಾಯಾ ವ್ಯವಸ್ಥಿತವಾದ ಕಾರ್ಯಗಳಲ್ಲಿ ತಾವಾ ಗಿಯೇ ಪ್ರವರ್ತಿಸುವಂತೆ ಮಾಡುವನು. ಸೃಷ್ಟಿಯ ಆದಿಯಲ್ಲಿ ಜಡ ಶಕ್ತಿಯಾದ ಪ್ರಕೃತಿಯೂ ಪರಮಾತ್ಮನ ವೀಕ್ಷಣ ಮಾತ್ರದಿಂದಲೇ ಸೃಷ್ಟಿಯಲ್ಲಿ ತೊಡಗುವುದು. ಚರಾಚರಾತ್ಮಕವಾದ ಜಗತ್ತಿನ ರೂಪ ದಲ್ಲಿ ಪರಿಣಾಮಗೊಳ್ಳುವುದು.

**'ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್'**

ಎಂಬುದಾಗಿ ಗೀತೆಯೂ ಈ ವಿಷಯವನ್ನು ತಿಳಿಸುವುದು. ತಾನು ಸಾಕ್ಷೀಭೂತನಾಗಿದ್ದ ಮಾತ್ರದಿಂದಲೇ ಪ್ರಕೃತಿಯು ಚರಾಚರ ಜಗ ತ್ತನ್ನು ಸೃಷ್ಟಿಸುವುದೆಂಬುದೇ ಇದರ ಅರ್ಥ.

63. **ಭೋಗ ವಸ್ತುಗಳ ದೃಷ್ಟಾಂತ.**

ಮನೋಹರವಾದ ವಾದ್ಯಗಳು ವೀಣಾ ವೇಣು ಮೃದಂಗ ಮೊದಲಾದುವು ಬಾರಿಸಲ್ಪಡುವಾಗ, ಕೋಗಿಲೆಯ ಕಂಠದಂತಿರುವ ಗಾಯಕಿಯರ ಸಂಗೀತಗಳು ಇದ್ದ ಜಾಗದಲ್ಲೇ ಇದ್ದು, ದೂರದಲ್ಲಿ ಇದ್ದವರನ್ನು ತನ್ನ ಕಡೆಗೆ ಸೆಳೆದುಕೊಂಡು ಬರಮಾಡುವುವು. ನಾಟ್ಯ ಗಳೂ, ಅದ್ಭುತ ದೃಶ್ಯಗಳೂ ನರ್ತನಗಳೂ, ಸಿನಿಮಾ ದೃಶ್ಯಗಳೂ

ಸುಂದರವಾದ ನಗರಗಳೂ ನಮ್ಮನ್ನು ಆಕರ್ಷಿಸುವುವು. ಆಧುನಿಕ ಟಿ.ವಿ.ಗಳು ಎಲ್ಲರನ್ನೂ ಆಕರ್ಷಿಸುತ್ತವೆ. ದಿವ್ಯವಾದ ಭಕ್ಷ್ಯ, ಭೋಜ್ಯಗಳಿಂದ ತುಂಬಿದ ಷಡ್ರಸಗಳಿರುವ ಪಾಕಗಳೂ ನಮ್ಮನ್ನು ಆಕರ್ಷಿಸಿ, ಊಟಕ್ಕೆ ಎಳೆಸುವುವು. ದಿವ್ಯವಾದ ಸುಗಂಧ ಪರಿಮಳ ವಸ್ತುಗಳು ದಿವ್ಯವಾದ ವಸ್ತ್ರಗಳು, ಉಡುಪುಗಳು ನಮ್ಮನ್ನು ಸೆಳೆಯುತ್ತವೆ. ಈ ಭೋಗವಸ್ತುಗಳು ಇದ್ದ ಸ್ಥಳದಲ್ಲೇ ಇದ್ದು ಆಕರ್ಷಿಸುವಂತೆ ಪರಮಾತ್ಮನು ಸ್ವಲ್ಪವೂ ಚಲಿಸದೆ ಉಳಿದ ಜೀವ ಜಂತುಗಳೂ, ಇಡೀ ಜಗತ್ತೂ ವ್ಯವಹಾರದಲ್ಲಿ ತೊಡಗುವಂತೆ ಮಾಡುತ್ತಾನೆ.

## 61. ಹಾಲಿನ ದೃಷ್ಟಾಂತ

ಬಾಹ್ಯ ಉಪಕರಣಗಳು ಏನೂ ಇಲ್ಲದಿದ್ದರೂ ಆಂತರೀಯವಾದ ತನ್ನ ಶಕ್ತಿಯಿಂದ ಬ್ರಹ್ಮವು ವಿವಿಧ ಪರಿಣಾಮಗಳನ್ನು ಹೊಂದುವುದು. ಇದಕ್ಕೊಂದು ಹಾಲಿನ ದೃಷ್ಟಾಂತ. ಹಾಲಿಗೆ ನಾವು ಹೆಪ್ಪು ಹಾಕದೆ ಇದ್ದರೂ ಹಾಲು ಕ್ರಮೇಣ ಮೊಸರಾಗುವುದು. ಹಾಗೆಯೇ ಪರಬ್ರಹ್ಮವು, ಪಂಚಭೂತಗಳ ರೂಪದಿಂದ ಪರಿಣಾಮಗೊಳ್ಳುವುದು. ಬಾಹ್ಯದ ಉಪಕರಣಗಳೇ ಬೇಕಿಲ್ಲ. ತನ್ನ ಅಧೀನವಾದ ಆಂತರೀಯ ಶಕ್ತಿಯಿಂದಲೇ ಪ್ರಪಂಚರೂಪದಲ್ಲಿ ರೂಪಾಂತರವನ್ನು ಹೊಂದುವುದು.

## 62. **ದೇವತೆಗಳು, ಋಷಿಗಳು, ಯೋಗಿಗಳು** ಇವರ ದೃಷ್ಟಾಂತಗಳು.

ಈಶ್ವರನಿಗೆ ಯಾವ ಬಾಹ್ಯ ಉಪಕರಣಗಳು ಇಲ್ಲದಿದ್ದರೂ ಈ ಜಗತ್ತನ್ನು ಸೃಷ್ಟಿಮಾಡುವನು. ಈ ವಿಷಯಕ್ಕೆ ಮೇಲಿನ ದೃಷ್ಟಾಂತಗಳು. ಇಂದ್ರನು ಬ್ರಾಹ್ಮಣ ರೂಪವನ್ನು ತಾಳಿ ಕರ್ಣನಲ್ಲಿಗೆ ಬಂದು ಕವಚ, ಕುಂಡಲಗಳನ್ನು ಯಾಚಿಸಿದನು. ಇಂದ್ರನು ಹೇಗೆ ಬಂದ? ಬ್ರಾಹ್ಮಣ ರೂಪವನ್ನು ಹೇಗೆ ತಾಳಿದ? ಕುಂತಿಯು ದೂರ್ವಾಸ

ಮುನಿಗಳು ಉಪದೇಶ ಕೊಟ್ಟ ಮಂತ್ರವನ್ನು ಜಪಿಸಿದ ಕೂಡಲೇ ಸೂರ್ಯನು ಕುಂತಿಯ ಹತ್ತಿರ ಬಂದು ನಿಂತನು. ಸೂರ್ಯನು ಆಕಾಶ ದಲ್ಲಿದ್ದಂತೆ ಕೆಳಕ್ಕೆ ಪುರುಷಾಕಾರವುಳ್ಳವನಾಗಿ ಹೇಗೆ ಕಾಣಿಸಿಕೊಂಡನು? ಅವನ ಅನುಗ್ರಹದಿಂದ ಕುಂತಿಯಲ್ಲಿ ಕರ್ಣನು ಆ ಕ್ಷಣವೇ ಹೇಗೆ ಹುಟ್ಟಿ ಕೊಂಡನೆಂಬುದಕ್ಕೆ ಏನು ಉತ್ತರವೋ, ಇವುಗಳಿಗೆಲ್ಲಾ ಅದೇ ಉತ್ತ ರವು. ಅಂದರೆ ದೇವತೆಗಳಿಗೆ ಅಂತರೀಯವಾದ ಸಹಜ ಶಕ್ತಿಯಿರುವುದು. ಹಾಗೆಯೇ ಯೋಗಿಗಳಿಗೂ ಇರುವುದು. ಹೊರಗಿನ ಉಪಕರಣಗಳೇ ಬೇಕಿಲ್ಲ. ಸೌಭರಿ ಮಹರ್ಷಿಯು ಐನೂರು ಶರೀರಗಳನ್ನು ಹೊಸದಾಗಿ ಸೃಷ್ಟಿಸಿಕೊಂಡು ಅವುಗಳಲ್ಲಿ ತಾನು ಹೊಕ್ಕು ಗೃಹಸ್ಥನಾಗಿದ್ದು ಭೋಗ ಪಟ್ಟನೆಂದು ಮಹಾಭಾರತದ ಕಥೆಯಿದೆ. ಭರದ್ವಾಜರು ಆಶ್ರಮಕ್ಕೆ ಬಂದ ಭರತನಿಗೂ ಅವನ ಪರಿವಾರದವರಿಗೂ ಯಥೋಚಿತವಾಗಿ ಆತಿಥ್ಯ ವನ್ನು ಮಾಡಿದರೆಂದು ಕೇಳಿದ್ದೇವೆ. ಅವರು ಆತಿಥ್ಯಕ್ಕೆ ಬೇಕಾದ ಪದಾರ್ಥಗಳನ್ನು ಹೇಗೆ ಒದಗಿಸಿಕೊಂಡರೆಂಬುದು ವಿಚಾರಣೀಯ, ಅದ್ಭುತ. ಯೋಗಿಗಳಿಗೆ ಯೋಗಶಕ್ತಿಯೊಂದೇ ಮುಖ್ಯವು.

**'ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹತಾಂ ನೋಪಕರಣೇ'**

ಎಂಬುದಾಗಿ ಹೇಳಿದ ಮಹಾಕವಿಯ ವಾಣಿಯೇ ಇದನ್ನು ನಮಗೆ ಉತ್ತರಿಸಿರುವುದು. ಮಹಾತ್ಮರಿಗೆ ಅಂತಸ್ಸತ್ವವು ಇದ್ದರೆ ಎಲ್ಲಾ ಕಾರ್ಯಗಳೂ ಸಿದ್ಧಿಸುವುವು. ಉಪಕರಣವಿದ್ದು ಸಿದ್ಧಿಸುವುದಲ್ಲವೆಂ ಬುದೇ ಅದರ ಅರ್ಥ. ಹಾಗೆಯೇ ಸರ್ವೇಶ್ವರನಾದ ಪರಮಾತ್ಮನಿಗೆ ಅಂತರೀಯವಾದ ಸಕಲಶಕ್ತಿಗಳೂ ಇರುವುದರಿಂದ ಹೊರಗಿನ ಕಾರಣ ಸಾಮಗ್ರಿಗಳು ಇಲ್ಲದಿದ್ದರೂ ಪ್ರಪಂಚವನ್ನು ಸೃಷ್ಟಿಸಬಲ್ಲನೆಂದು ಮೇಲಿನ ದೃಷ್ಟಾಂತಗಳಿಂದ ಅರಿಯಬೇಕು.

66. ಬ್ರಹ್ಮನಿಂದ ತನ್ನ ಸ್ವರೂಪಕ್ಕೆ ಚ್ಯುತಿಯಿಲ್ಲದೆ ಮಾಯಿಕ ವಾದ ಅನೇಕ ಪರಿಣಾಮಗಳು ಹುಟ್ಟುವುವು, ಎಂಬುದಕ್ಕೆ **ಸ್ವಪ್ನವನ್ನು**

ಕಾಣುವ ಆತ್ಮನ ದೃಷ್ಟಾಂತ. ಸ್ವಪ್ನವನ್ನು ಕಾಣುವ ಆತ್ಮನಲ್ಲಿ ಯಾವ ಸಾಧನೆಯೂ ಇಲ್ಲದೆ ಗಜ, ತುರಗಗಳೂ, ಗ್ರಾಮ ನಗರಾದಿಗಳೂ ವಿಚಿತ್ರವಾಗಿ ಹುಟ್ಟಿಕೊಂಡು ತೋರುವುವು. ಹಾಗೆಯೇ ಪರ ಬ್ರಹ್ಮನಲ್ಲಿ, ಪೃಥಿವ್ಯಾದಿ ಪಂಚಭೂತಗಳೂ ಈ ಭೌತಿಕ ಪ್ರಪಂಚವೂ ಸಂಕಲ್ಪಮಾತ್ರದಲ್ಲಿಯೇ ಹುಟ್ಟಿಕೊಳ್ಳುವುವು, ಕಾಣುವುವು.

## 67. ಇಂದ್ರಜಾಲ ಮಾಯಾವಿಯ ದೃಷ್ಟಾಂತ

ಮಾಯಾವಿಯು ಇಂದ್ರಜಾಲವನ್ನು ತೋರಿಸುವಾಗ ಒಂದು ನೂಲಿನ ಉಂಡೆಯನ್ನು ಮೇಲೆ ಹಾಕಿ, ತಾನು ಅದರ ಮೇಲೆ ಹತ್ತಿದಂತೆಯೂ, ಆಕಾಶದಲ್ಲಿ ಖಡ್ಗವನ್ನು ಹಿಡಿದು ಹತ್ತು ದಿಕ್ಕುಗಳಲ್ಲೂ ಝಳಪಿಸಿ ಕೆಳಗೆ ಇಳಿಯುವನೆಂದೂ ಶಂಕರಾಚಾರ್ಯರು ಅವರ ಕಾಲದ ಒಂದು ಇಂದ್ರಜಾಲವನ್ನು ಉದಾಹರಿಸಿದ್ದಾರೆ. ಇದರಲ್ಲಿ ನಿಜವಾದ ಮಾಯಾವಿಯು ನೆಲದ ಮೇಲೆ ನಿಂತೇ ಇರುವನು. ಇದ್ದ ಹಾಗೆಯೇ ತನ್ನಂತೆಯೇ ಇರುವವನನ್ನು ಸೃಷ್ಟಿಸಿ ತೋರಿಸಿರುವನು. ಹಾಗೆಯೇ ಈಶ್ವರನ ಸ್ವರೂಪಕ್ಕೆ ಚ್ಯುತಿಯಿಲ್ಲದೆ ಇದ್ದ ಹಾಗೆಯೇ ಪಂಚಭೂತ ಸೂಕ್ಷ್ಮಶರೀರ, ಹಿರಣ್ಯಗರ್ಭ, ಜೀವ ಇತ್ಯಾದಿಗಳು ಸೃಷ್ಟಿಯಾಗುವುವು ಎಂದು ಈ ಉದಾಹರಣೆಯಿಂದ ತಿಳಿಯಬೇಕು.

## 68. ವಟ ಬೀಜ ದೃಷ್ಟಾಂತ

ಅತಿ ಸೂಕ್ಷ್ಮ ವಸ್ತುವಿನಿಂದ ದೊಡ್ಡ ಪ್ರಪಂಚವು ಹುಟ್ಟಿತೆಂಬುದಕ್ಕೆ **ಆಲದ ಬೀಜದ ದೃಷ್ಟಾಂತ.** ಆಲದ ಮರದ ಬೀಜವು ಕಣ್ಣಿಗೆ ಕಾಣದಷ್ಟು ಸಣ್ಣದಾಗಿರುತ್ತದೆ. ಆದರೆ ಅದರಿಂದ ಹುಟ್ಟುವ ಮರವು ಬೀಜಗಳಿಂದ ತುಂಬಿ ವಿಸ್ತಾರವಾಗಿರುವುದು. ಹಾಗೆಯೇ ಪರಬ್ರಹ್ಮವು ಸೂಕ್ಷ್ಮವಾಗಿದ್ದರೂ ಕಣ್ಣಿಗೆ ಗೋಚರಿಸದಿದ್ದರೂ ಅದರಿಂದ ಈ ವಿಸ್ತಾರವಾದ ಬ್ರಹ್ಮಾಂಡವು ಹುಟ್ಟಿ ಬೆಳೆದು ನಿಂತಿದೆ.

## 69. ಅಕ್ಕಸಾಲಿಯ ಅಡಿಗಲ್ಲಿನ ದೃಷ್ಟಾಂತ

ಅಕ್ಕಸಾಲಿಯು ಚಿನ್ನಬೆಳ್ಳಿಗಳ ಆಭರಣಗಳನ್ನು ತಯಾರಿಸುವಾಗ ಒಂದು ಕಬ್ಬಿಣದ ಅಡಿಗಲ್ಲನ್ನು ಇರಿಸಿಕೊಂಡು ಅದರಮೇಲೆ ಚಿನ್ನದಗಟ್ಟಿಯನ್ನು ಇಟ್ಟು ಸುತ್ತಿಗೆಯಿಂದ ಹೊಡೆಯುತ್ತಾ ಇರುವಾಗ ಚಿನ್ನದಗಟ್ಟಿಯು ತೆಳುವಾಗುತ್ತಾ ತನ್ನ ಇಷ್ಟದಂತೆ ಆಭರಣಗಳಿಗೆ ತಕ್ಕಂತೆ ಮಾರ್ಪಾಡಾಗುತ್ತಾ ಹೋಗುವುದು. ಆದರೆ ಕೆಳಗೆ ಇರಿಸಿದ ಅಡಿಗಲ್ಲು ಮಾತ್ರ ಒಂದೇ ರೀತಿಯಾಗಿರುವುದು. ಅನೇಕ ವರ್ಷಗಳಾದರೂ ಮಾರ್ಪಡದೇ ಇರುವುದು. ಇದರಂತೆಯೇ ಬ್ರಹ್ಮವು ಪಂಚಭೂತಗಳ ರೂಪದಲ್ಲಿ ಪರಿಣಾಮವಾಗುತ್ತಲಿದ್ದರೂ ತನ್ನ ಸ್ವರೂಪವು ಬದಲಾಗದೆ ಒಂದೇ ರೀತಿಯಾಗಿರುವುದು.

## 70. ವಜ್ರ ವೈಡೂರ್ಯಾದಿ ದೃಷ್ಟಾಂತ.

ಒಂದರಿಂದ ಅನೇಕ ಬಗೆಯಾದ ಸೃಷ್ಟಿಯಾಗಬಹುದೇ? ಎಂದರೆ ಆಗಬಹುದು. ಒಂದೇ ಭೂಮಿಯಲ್ಲಿ ವಜ್ರ, ವೈಡೂರ್ಯ, ಹವಳ, ಪುಷ್ಯರಾಗ ಮೊದಲಾದ ನವರತ್ನಗಳು ಇತರ ಕಲ್ಲುಗಳೂ ಹುಟ್ಟುತ್ತವೆ. ಹಾಗೆಯೇ ಒಂದೇ ಬ್ರಹ್ಮವಸ್ತುವಿನಲ್ಲಿ ವಿವಿಧ ಸೃಷ್ಟಿಯಾಗಬಹುದು. ಭೂಮಿಯಲ್ಲಿ ಭತ್ತ, ಗೋಧಿ, ರಾಗಿ, ಜೋಳ ಮೊದಲಾದ ಭೋಗ್ಯ ವಸ್ತುಗಳಂತೆ ಸ್ವೇದಜ, ಅಂಡಜ, ಜರಾಯುಜ, ಉದ್ಭಿಜ್ಜ ವೆಂಬುವ ಪ್ರಾಣಿಗಳು ಹುಟ್ಟುವುವು. ಹಾಗೆಯೇ ಬ್ರಹ್ಮನಲ್ಲಿ ಅನಂತ ಶಕ್ತಿಗಳಿರುವುದರಿಂದ, ಸಕಲ ಭೋಗ್ಯ ವಸ್ತುಗಳು, ಭೋಗಿಸುವ ಜೀವರು ವಿವಿಧವಾಗಿ ಹುಟ್ಟುವರು. ಇದು ಯುಕ್ತವೇ ಆಗಿದೆ.

71. ಈಶ್ವರನು ಕೆಲವರನ್ನು ಸುಖಿಗಳನ್ನಾಗಿಯೂ, ಇನ್ನು ಕೆಲವರನ್ನು ಕೇವಲ ದುಃಖಿಗಳನ್ನಾಗಿಯೂ ಏಕೆ ಸೃಷ್ಟಿಸುವನು? ಈ ಬಗೆಯಲ್ಲಿ ಜೀವರನ್ನು ಸೃಷ್ಟಿಸುವ ಈಶ್ವರನು ನಿಷ್ಕರುಣಿ, ಪಕ್ಷಪಾತಿ

ಸಿ ಸು ಆಗುವುದಿಲ್ಲವೆ? ಕರುಣಾಮಯನಾಗಿದ್ದರೆ ಎಲ್ಲರನ್ನೂ ಒಂದೇ ರೀತಿಯಾಗಿ ಸುಖಿಗಳಾಗಿಯೇ ಇರಿಸಬೇಕಲ್ಲವೆ? ಎಂದು ಕೇಳಿದರೆ, ಇದಕ್ಕೆ ಉತ್ತರವಾಗಿ ಹೇಳಲು **ಪರ್ಜನ್ಯ ದೃಷ್ಟಾಂತವನ್ನು ಕೊಟ್ಟಿ** ದ್ದಾರೆ. ಪರ್ಜನ್ಯ ಎಂದರೆ ಮಳೆ. ಅದು ಹೇಗೆ ಒಂದೇ ರೀತಿಯಾಗಿ ಸುರಿದರೂ ಸ್ವಲ್ಪ ಸಿಹಿಯಾದ ಒಂದೇ ಗುಣವುಳ್ಳದ್ದಾದರೂ ಅದರಿಂದ ಬೆಳೆ ಯುವ ಗಿಡಗಳಲ್ಲಿ, ಮರಗಳಲ್ಲಿ, ನಾನಾ ಬಗೆಯಾದ ರಸವುಳ್ಳ ಹಣ್ಣು ಗಳು, ಬಿಡುವುವು. ನಿಂಬೆ ಗಿಡದಲ್ಲಿ ಹುಳಿರಸದ ನಿಂಬೆ ಹಣ್ಣು ಗಳು, ಹುಣಿಸೆ ಗಿಡದಲ್ಲಿ ಹುಣಸೆ ಹಣ್ಣು, ಮಾವಿನಮರದಲ್ಲಿ ಸಿಹಿ ಮಾವಿನಹಣ್ಣು, ದ್ರಾಕ್ಷಿಬಳ್ಳಿಯಲ್ಲಿ ಸಿಹಿ ದ್ರಾಕ್ಷಿಗಳು, ಬೇವಿನ ಗಿಡದಲ್ಲಿ ಕಹಿಯಾದ ಬೇವಿನಕಾಯಿ, ಹಾಗಲ ಬಳ್ಳಿಯಲ್ಲಿ ಕಹಿ ಹಾಗಲಕಾಯಿ ಗಳು, ಹೀಗೆಯೇ ಖಾರದ ಮೆಣಸಿನಕಾಯಿಗಳು ಬಿಡುವುವು. ಮಳೆನೀರು ಒಂದೇ ರಸವಾಗಿದ್ದರೂ ಗಿಡಗಳ ಬೀಜಗಳು ಬಗೆಬಗೆಯಾಗಿರುವುದರಿಂದ ಫಲಗಳಲ್ಲಿ ವ್ಯತ್ಯಾಸವಾಗಿದೆ. ಅದರಂತೆ, ಪರ್ಜನ್ಯದಂತೆ ಈಶ್ವರನು ನಿಮಿತ್ತ ಕಾರಣ. ಜೀವರ ಸುಖ ದುಃಖಗಳ ಹೆಚ್ಚು ಕಡಿಮೆಗೆ ಅವರವರ ಪಾಪಪುಣ್ಯಗಳೇ ಮುಖ್ಯಕಾರಣ. ಈ ಪಾಪ ಪುಣ್ಯಗಳನ್ನು (ಸಂಸ್ಕಾರ ಗಳನ್ನು) ಆಧಾರಮಾಡಿಕೊಂಡೇ ಜೀವರನ್ನು ವಿಚಿತ್ರವಾಗಿ, ಬಗೆಬಗೆ ಯಾಗಿ ಸೃಷ್ಟಿಸುವುದರಿಂದ ಈಶ್ವರನಿಗೆ ಯಾವ ದೋಷವೂ ಬರುವುದಿಲ್ಲ. ಈಶ್ವರನು ನಿಮಿತ್ತ ಮಾತ್ರ ಎಂದು ಪರ್ಜನ್ಯ ದೃಷ್ಟಾಂತದಿಂದ ತಿಳಿಯ ಬೇಕು.

72. ಸುಷುಪ್ತಾತ್ಮನು (ಗಾಢನಿದ್ರೆಯಲ್ಲಿರುವವನು) ಸಮಸ್ತ ಸಂಸಾರಗಳಿಂದ ಬಿಡಲ್ಪಟ್ಟಿರುವನೆಂಬುದಕ್ಕೆ 1) **ಸಣ್ಣ ಬಾಲಕ** 2) ಪ್ರಜೆಗಳನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡಿರುವ **ಮಹಾರಾಜ** 3) ಅತ್ಯಂತ ಪರಿಪಕ್ವವಾದ ವಿದ್ಯಾವಿನಯಗಳಿಂದ ಕೂಡಿದ**ಮಹಾ ಬ್ರಾಹ್ಮಣ ಇವರ ದೃಷ್ಟಾಂತಗಳು**

1) ಸ್ವಭಾವವಾಗಿಯೇ ದುಃಖವಿಲ್ಲದೆ ಸುಖವಾಗಿರುವ ಸಣ್ಣ

ಹುಡುಗನು ಆನಂದವಾಗಿ ನಲಿದಾಡುತ್ತಾನೆ. ಅವನ ಆಟಗಳಿಗೆ ಅಡ್ಡಿ ಬಂದರೆ ಮಾತ್ರ ದುಃಖಿಪಾಗುವುದು. ಸ್ವಭಾವವಾಗಿ ಆನಂದವಾಗಿರುವ ಸ್ಥಿತಿಯೇ ಸುಷುಪ್ತಾತ್ಮನಿಗೆ ಉದಾಹರಣೆ. 2) ನಿಷ್ಕಂಟಕವಾಗಿ ರಾಜ್ಯಭಾರ ನಡೆಯಿಸುವ ಮಹಾರಾಜನೂ ಆನಂದವಾಗಿರುತ್ತಾನೆ. 3) ಹಾಗೆಯೇ ತುಂಬಿದ ವಿದ್ಯೆಯಿರುವ ಮತ್ತು ವಿನಯ ಸಂಪನ್ನನಾದ ಮಹಾಬ್ರಾಹ್ಮಣನೂ ಆನಂದವಾಗಿರುತ್ತಾನೆ. ಇವರುಗಳ ಸ್ಥಿತಿಯಂತೆ ಸುಷುಪ್ತಾತ್ಮನ ಸ್ಥಿತಿಯು, ಸ್ವಲ್ಪವೂ ದುಃಖವಿಲ್ಲದ ಆನಂದವಾಗಿರುವ ಸ್ಥಿತಿಯೆಂದು ಅರಿಯಬೇಕು.

## 73. ನೀರಿನಲ್ಲಿ ಕರಗಿದ ಲವಣ ದೃಷ್ಟಾಂತ

ಅತಿ ಸೂಕ್ಷ್ಮವಾದ ವಸ್ತುವು ಕಣ್ಣಿಗೆ ಕಾಣದಿದ್ದರೂ ಮತ್ತೊಂದು ಇಂದ್ರಿಯದಿಂದ ತಿಳಿಯಬಹುದು. ಒಂದು ಉಪ್ಪಿನ ಗಟ್ಟಿಯನ್ನು ನೀರಿನೊಳಗೆ ಹಾಕಿ ನೋಡಿದರೆ ನೀರಿನಲ್ಲಿ ಅಡಗಿ ಕರಗಿಹೋಗುವುದು. ಕರಗಿದಾಗ ನೀರಿನಲ್ಲಿ ಗಟ್ಟಿ ಉಪ್ಪನ್ನು ಕಣ್ಣಿನಿಂದ ನೋಡುವುದಕ್ಕೆ ಬರುವುದಿಲ್ಲ, ಆದರೂ ನಾಲಗೆಯಿಂದ ನೀರನ್ನು ಸೇವಿದಾಗ ನೀರು ಉಪ್ಪಾಗಿರುವುದು ಕಾಣುತ್ತದೆ. ಇದು ಉಪ್ಪಾಗಿದೆಯೆಂಬುದು ರಸನೇಂದ್ರಿಯದಿಂದ ತಿಳಿಯಿತಷ್ಟೆ. ಹಾಗೆಯೇ **'ಅಣೋರಣೀಯಾನ್'** ಎಂದಂತೆ ಅಣುವಿಗೂ ಅಣುವಾಗಿ ಸೂಕ್ಷ್ಮವಾಗಿರುವ ವ್ಯಾಪಕನಾದ ಪರಮಾತ್ಮನು ನಮ್ಮ ಕಣ್ಣಿಗೆ ಅಥವಾ ಇತರ ಬಹಿರಿಂದ್ರಿಯಗಳಿಗೆ ಗೋಚರಿಸದಿದ್ದರೂ ಏಕಾಗ್ರತೆಯನ್ನು ಹೊಂದಿದ ನಿರ್ಮಲ ಬುದ್ಧಿಯಿಂದ ತಿಳಿಯಲು ಸಾಧ್ಯವಿದೆ. **'ಧ್ಯಾನೇನಾತ್ಮನಿ ಪಶ್ಯನ್ತಿ'** ಎಂದು ಹೇಳಿದಂತೆ ಯೋಗಿಗಳು ಧ್ಯಾನದಿಂದ ಕಾಣುತ್ತಾರೆ. ನಾವು ಪ್ರಯತ್ನಿಸಿದರೆ ಕಾಣಬಹುದು.

## 74. ಸತ್ಯವನ್ನು ಹೇಳಿದ ತಸ್ಕರ ದೃಷ್ಟಾಂತ

ಒಬ್ಬ ಕಳ್ಳನನ್ನು ಗುಮಾನಿಯಿಂದ ಪೋಲೀಸರು ಹಿಡಿದು ತಂದ, ಕಾರಾಗೃಹದಲ್ಲಿ ಬಂಧಿಸಿದ್ದರು. ಅವನು ಸುಳ್ಳು ಹೇಳುತ್ತಾನೋ ನಿಜ ಹೇಳುತ್ತಾನೋ, ಎಂಬುದನ್ನು ಪರೀಕ್ಷಿಸಲು ಪ್ರಾಚೀನಕಾಲದಲ್ಲಿ ಕಾಯಿಸಿದ ಕೊಡಲಿಯನ್ನು ಕಳ್ಳನ ಕೈಮೇಲೆ ಇರಿಸಿ ನೋಡುತ್ತಲಿದ್ದರು. ಆ ಕೊಡಲಿ ಕೈಯನ್ನು ಸುಟ್ಟರೆ ಸುಳ್ಳು ಹೇಳಿದ್ದಾನೆ. ಅದು ಸುಡದೆ ಇದ್ದರೆ ಸತ್ಯ ಹೇಳಿದ್ದಾನೆಂದು, ಆಗ ಅವನನ್ನು ಬಂಧನದಿಂದ ಬಿಡುಗಡೆ ಮಾಡುತ್ತಿದ್ದರು. ಇಲ್ಲಿ ಸುಳ್ಳು ಹೇಳಿದವನಿಗೆ ಬಂಧನ, ಸತ್ಯ ಹೇಳಿದವನಿಗೆ ಬಿಡುಗಡೆ ಎಂದು ತಿಳಿದಂತೆ ಮಿಥ್ಯಾಭೂತವಾದ ಈ ಜಗತ್ತನ್ನು ಪೃಥಕವಾಗಿ ನಂಬಿ ಅವಲಂಬಿಸಿದವನಿಗೆ ಸಂಸಾರದಲ್ಲಿ ಬಂಧನ, ಪದೇ ಪದೇ ಜನನ, ಮರಣ, ದುಃಖಗಳನ್ನು ಅನುಭವಿಸುವುದು ತಪ್ಪದು. ಈ ಮಿಥ್ಯಾ ಜಗತ್ತನ್ನು ಬಿಟ್ಟು ಅದರಲ್ಲಿ ಅಭಿಮಾನವಿಡದೆ ಸತ್ಯವಾದ ಪರಮಾರ್ಥವಾದ ಪರಬ್ರಹ್ಮವನ್ನೇ ಅವಲಂಬಿಸಿ ಶ್ರವಣ, ಮನನಾದಿಗಳಿಂದ ಸಾಕ್ಷಾತ್ಕಾರ ಮಾಡಿಕೊಂಡವನಿಗೆ ಬಂಧನದಿಂದ ಮುಕ್ತಿಯು ಸಿಗುವುದು. ಇದನ್ನೇ ತಸ್ಕರ ದೃಷ್ಟಾಂತದಿಂದ ಅರಿಯಬೇಕು.

## 75. ಆರಾಗ್ರ ದೃಷ್ಟಾಂತ

ಭರ್ಜಿಯ ತುದಿಯಲ್ಲಿ ಸೇರಿಸುವ ಚೂಪಾಗಿರುವ ಕಬ್ಬಿಣದ ಕಡ್ಡಿ ಆರಾ. ಅದರ ತುದಿ ಮೊನೆಯೇ ಅಗ್ರ. ಅದರಂತೆ ಜೀವಾತ್ಮನು ಸಣ್ಣದಾಗಿರುವವನು ಎಂದು ವೇದವು ಬೋಧಿಸಿದೆ.

**ಆರಾಗ್ರಮಾತ್ರೋಽಹ್ಯವರೋಽಪಿ ದೃಷ್ಟಃ**

ಸ್ಮೃತಿಯಲ್ಲಿ ಈ ದೃಷ್ಟಾಂತವಿದೆ. (ಇದು ನಿಜವಾದ ಅಣುತ್ವವುಳ್ಳದ್ದಲ್ಲವೆಂದು ಅರಿಯಬೇಕು)

### 76. ಕೇಶದ ನೂರನೇ ಒಂದು ಭಾಗದಲ್ಲಿ ನೂರನೇ ಒಂದು ಭಾಗದ ದೃಷ್ಟಾಂತ

**ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯ ಚ |**
**ಭಾಗೋ ಜೀವಃ ಸವಿಜ್ಞೇಯಃ............**

ಎಂದು ಉದಾಹರಿಸಿದಂತೆ ಜೀವನು ಒಂದು ತಲೆ ಕೂದಲಿನ ನೂರನೇ ಒಂದು ಭಾಗದಲ್ಲಿ ನೂರನೇ ಒಂದು ಭಾಗದಷ್ಟು ಸಣ್ಣದಾಗಿ ಅಣುವಾಗಿರುವನು. ಆದರೆ ಅಂತಃಕರಣ ಸಣ್ಣದಾಗಿರುವುದರಿಂದ ಅದ ರಲ್ಲಿ, ಅದರೊಂದಿಗೆ ಕಾಣುವ ಜೀವಾತ್ಮನು ಸೂಜಿ ಮೊನೆಯಷ್ಟು ಸಣ್ಣ ದಾಗಿರುವಂತೆ ತೋರುವನು. ನಿಜವಾಗಿ ಜೀವಾತ್ಮನ ಸ್ವರೂಪ ವ್ಯಾಪಕ, ವಿಭು. ಘಟಾಕಾಶ, ಕರಕಾಕಾಶಗಳಂತೆ (ಕರಕ–ಕಮಂಡಲು) ಔಪಾಧಿಕ ವಾದ ಅಣುತ್ವವುಳ್ಳವನೆಂದು ನಿಜಾರ್ಥವನ್ನು ಇಲ್ಲಿ ಗ್ರಹಿಸಬೇಕು.

### 77. ಸೇತು ದೃಷ್ಟಾಂತ

ಸೇತು ಅಂದರೆ ಅಣೆಕಟ್ಟು. ಅಣೆಕಟ್ಟನ್ನು ಹಾಕಿದರೆ ಅದು ಪ್ರವಹಿ ಸುವ ನೀರನ್ನು ತಡೆದು ನಿಲ್ಲಿಸುವುದು. ಸಿಕ್ಕಾಪಟ್ಟೆ ನೀರು ಹರಿದು ಹೋಗುವುದನ್ನು ನಿಲ್ಲಿಸುವುದು. ಅದರಂತೆ ಪರಮೇಶ್ವರನು ಲೋಕದ ಧರ್ಮಾಧರ್ಮಗಳ ಮರ್ಯಾದೆ (ವ್ಯವಸ್ಥೆ)ಯನ್ನು ಜೀವರು ಮೀರಿ ಹೋಗದಂತೆ, ಸಂಕರವಾಗದಂತೆ ನಿಯಂತ್ರಿಸುವನು
**ಏಷ ಸೇತುರ್ವಿಧರಣಃ ಏಷಾಂ ಲೋಕಾನಾಮ ಸಂಭೇದಾಯ** ಎಂದು ಶ್ರುತಿಯೂ ಉದಾಹರಿಸಿದೆ.

### 78. ಕಮಲದ ಮೊಗ್ಗೆಯ ದೃಷ್ಟಾಂತ

ಹೃದಯ ಕೋಶಕ್ಕೆ ಕಮಲದ ಮೊಗ್ಗೆಯ ಹೋಲಿಕೆಯನ್ನು ತೋರಿಸಿದೆ. **'ಪದ್ಮಕೋಶ ಪ್ರತೀಕಾಶಂ ಹೃದಯಂಚಾಪ್ಯಧೋ**

**ಮುಖಂ'** ಎಂದು ತೈತ್ತರೀಯದಲ್ಲೂ **'ದಹರಂ ಪುಂಡರೀಕಂವೇಶ್ಮ'** ಎಂದು ಛಾಂದೋಗ್ಯದಲ್ಲೂ ಇದನ್ನು ಕಾಣಬಹುದು. ನಮ್ಮ ನಮ್ಮ ಹೃದಯಕೋಶವು ಕಮಲದ ಮೊಗ್ಗೆಯಂತೆ ಇದ್ದು ಕೆಳಮುಖವಾಗಿದೆ ಯೆಂದು ವರ್ಣಿಸಿದೆ. ಅಶ್ವತ್ಥದ ಎಲೆಯ ಮೇಲೆ ನಾರುಗಳಿರುವಂತೆ ಹೃದಯಕೋಶದ ಮೇಲೆ ನರನಾಡಿಗಳೂ ಇವೆಯೆಂದು ಭಾಷ್ಯದಲ್ಲಿ ವರ್ಣಿಸಿರುವರು.

## 79. ಅಶ್ವದ ದೃಷ್ಟಾಂತ

ಈಶ್ವರೋಪಾಸಕನು ತಾನು ಬ್ರಹ್ಮಲೋಕಕ್ಕೆ ಹೋಗುವ ಮೊದಲೇ, ಕುದುರೆಯು ಧೂಳು ಕೂತಿರುವ ರೋಮಗಳನ್ನು ಪಟಪಟನೆ ಕೊಡಹಿಕೊಳ್ಳುವಂತೆ, ಉಪಾಸನೆಯಿಂದ ತನ್ನ ಎಲ್ಲಾ ಪಾಪಗಳನ್ನು ಕೊಡಹಿಕೊಂಡು ಶುದ್ಧನಾಗುತ್ತಾನೆ. ಅದು ಹೇಗೆ ಶುದ್ಧನಾಗುತ್ತಾನೆಂ ದರೆ ರಾಹು ಗ್ರಹಣದಿಂದ ಮುಕ್ತನಾದ ಚಂದ್ರನಂತೆ ಎಂಬ ದೃಷ್ಟಾಂತ ವನ್ನು ಕೊಟ್ಟಿದೆ.

**ಅಶ್ವ ಇವ ರೋಮಾಣಿ ವಿಧೂಯ ಪಾಪಂ**
**ಚಂದ್ರ ಇವ ರಾಹೋರ್ಮುಖಾತ್**
**ಪ್ರಮುಚ್ಯ ಧೂತ್ವಾ ಶರೀರ ಮಕೃತಂ**
**ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ**

ಎಂದು ಹೇಳಿದಂತೆ, ರಾಹುಗ್ರಹಣ ಹಿಡಿದು ಅನಂತರ ಮುಕ್ತನಾದ ಚಂದ್ರನು ಯಾವ ರೀತಿ ಅತಿ ಶುದ್ಧವಾಗಿ ಕಾಣುವನೋ ಹಾಗೆಯೇ ಈ ಉಪಾಸಕನೂ ನಿರ್ಮಲವಾಗಿ ಕೇವಲ ಪುಣ್ಯಾತ್ಮನಾಗಿ ಕಾಣುವನು. ಅನಂತರ ಈ ಶರೀರವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಏರುವನು.

## 80. ಶರೀರಕ್ಕೆ ರಥದ ದೃಷ್ಟಾಂತ

ಆತ್ಮನಿಗೆ ರಥದ ಸ್ವಾಮಿಯೂ, ಬುದ್ಧಿಗೆ ಸಾರಥಿಯೂ, ಮನ

ಸ್ಸಿಗೆ ಲಗಾಮೂ, ಇಂದ್ರಿಯಗಳಿಗೆ ಕುದುರೆಗಳೂ, ವಿಷಯಗಳಿಗೆ ಹೋಗುವ ಪ್ರದೇಶಗಳೂ ಉಪಮಾನಗಳಾಗಿ ರೂಪಕದಿಂದ ಹೋಲಿಸಲ್ಪಟ್ಟಿವೆ.

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು |**
**ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವಚ ||**
**ಇಂದ್ರಿಯಾಣಿ ಹಯಾನಾಹುಃ ವಿಷಯಾಂಸ್ತೇಷು**
**ಗೋಚರಾನ್ |**

ಈ ರೀತಿಯಾಗಿ ಕಠವಲ್ಲಿಯಲ್ಲಿ ವರ್ಣಿಸಲ್ಪಟ್ಟಿದೆ. ಇದರ ಭಾವಾರ್ಥವು ಹೀಗಿದೆ.

ಇಲ್ಲಿ ಶರೀರಕ್ಕೆ ರಥದ ಸಾಮ್ಯವನ್ನು ಕೊಟ್ಟಿರುವುದು ಏತಕ್ಕಾಗಿ ಎಂದರೆ ಸಂಸಾರಮಾರ್ಗದಲ್ಲಿ ಜೀವನು ಓಡಾಡುತ್ತಾ ಸಂಸಾರವನ್ನೇ ಹೊಂದುವನಾದ್ದರಿಂದಲೂ, ಮೋಕ್ಷ ಮಾರ್ಗವನ್ನು ಹಿಡಿದು ಸಂಸಾರದ ಆಚೆಯಿರುವ ವಿಷ್ಣುಪದವಿಯನ್ನು ಹೊಂದುವವನಾದ್ದರಿಂದಲೂ, ಓಡಾಡುವುದಕ್ಕಾಗಿ ಉಪಯೋಗಿಸುವ ರಥದಂತೆ ಶರೀರವನ್ನು ರಥವೆಂದು ಸಾದೃಶ್ಯದಿಂದ ರೂಪಕಮಾಡಿ ಹೇಳಿರುವುದು. ಶರೀರವೇ ರಥವಾದರೆ ಅದರ ಸ್ವಾಮಿಯಾಗಿ ಒಳಗೆ ಕೂತಿರುವ ಜೀವಾತ್ಮನನ್ನು ರಥಸ್ವಾಮಿಯೆಂದೂ, ರಥಕ್ಕೆ ಒಬ್ಬ ಸಾರಥಿಯೂ (ನಡೆಯಿಸುವವನು) ಲೋಕದಲ್ಲಿರುವಂತೆ ಬುದ್ಧಿಯನ್ನು ವಿವೇಕಯುಕ್ತನಾದ ಸಾರಥಿಯಂತೆ ಭಾವಿಸಿ ಸಾರಥಿಯೆಂದು ಕರೆದಿದೆ-

ಮನಸ್ಸು ಎಂಬುದನ್ನು ಕುದುರೆಯ ಲಗಾಮು ಎಂದು ಕರೆದಿದೆ. ಲಗಾಮಿನಿಂದ ಕುದುರೆಗಳನ್ನು ಹಿಡಿದು ನಿಯಮಿಸುವಂತೆ ಇಲ್ಲಿಯೂ ಇಂದ್ರಿಯಗಳೆಂಬ ವೇಗದ ಕುದುರೆಗಳನ್ನು ಹಿಡಿದುಕೊಳ್ಳಲು ಮನಸ್ಸೆಂಬುದನ್ನು ಪ್ರಗ್ರಹ ಲಗಾಮು ಎಂದು ರೂಪಿಸಿದೆ.

ಇಲ್ಲಿ ರಥಕ್ಕೆ ಕುದುರೆಗಳು ಇರುವಂತೆ ಶರೀರವೆಂಬ ರಥಕ್ಕೆ ಪಂಚ ಜ್ಞಾನೇಂದ್ರಿಗಳನ್ನೂ, ಪಂಚಕರ್ಮೇಂದ್ರಿಯಗಳನ್ನೂ ಕುದುರೆಯೆಂದು ಹಯಾನ್ ಎಂಬ ಶಬ್ದದಿಂದ ರೂಪಿಸಿದೆ.

ಕುದುರೆಗಳು ಹೋಗುವ, ಓಡಾಡುವ ಪ್ರದೇಶಗಳು ಯಾವುವೆಂದರೆ ವಿಷಯಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಪಂಚಭೋಗ ವಸ್ತುಗಳು, ಅಲ್ಲದೆ ವಚನ, ಆದಾನ (ತೆಗೆದುಕೊಳ್ಳುವುದು), ವಿಹರಣ (ಪಾದದ ಕೆಲಸ-ನಡೆಯುವುದು), ಉತ್ಸರ್ಗ (ವಿಸರ್ಜನೆ), ಆನಂದವೆಂಬುವ ಪಂಚಕರ್ಮ ವಿಷಯಗಳೂ ಇಲ್ಲಿ ಗ್ರಾಹ್ಯವಾಗಿವೆ. ದೇಹ, ಇಂದ್ರಿಯ, ಮನಸ್ಸು ಈ ಎಲ್ಲವೂ ಇದ್ದರೆ ವಿಷಯಗಳನ್ನು ಭೋಗಿಸಬಲ್ಲನು. ಇಲ್ಲವಾದರೆ ಇಲ್ಲವೆಂದು, **'ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ'**, ಎಂದು ತಿಳಿಸಿದೆ. ವಿವೇಕಿಯಾದ ಸಾರಥಿಯು ಕುದುರೆಗಳನ್ನು ಸರಿಯಾದ ದಾರಿಯಲ್ಲಿ ಓಡಾಡಿಸಿದರೆ ರಥವು ಹಳ್ಳಕ್ಕೆ ಬೀಳದೆ ಸರಿಯಾಗಿ ನಡೆದು ದೇಶವನ್ನು ಮುಟ್ಟುವುದು. ರಥದ ಸ್ವಾಮಿಗೂ ಒಳ್ಳೆಯದಾಗುವುದು. ಸಾರಥಿಯು ವಿವೇಕಯುಕ್ತನಾಗದೆ ಇಚ್ಛೆಬಂದಂತೆ ಕುದುರೆಗಳನ್ನು ಓಡಿಸಿದರೆ ರಥವು ಹಳ್ಳಕ್ಕೆ ಬಿದ್ದು ಸ್ವಾಮಿಗೂ ಕೆಡುಕಾಗುವುದು. ಅದರಂತೆ ಸ್ವೇಚ್ಛೆಯಿಂದ ವಿವೇಕವಿಲ್ಲದೆ ನಮ್ಮ ಬುದ್ಧಿಯು ಶಾಸ್ತ್ರ ನಿಯಮ ನಿಬಂಧನೆಗಳನ್ನು ಉಲ್ಲಂಘಿಸಿ ಮನಬಂದಂತೆ ಇಂದ್ರಿಯಗಳು ಹೋದಲ್ಲಿಗೆ ಅವುಗಳನ್ನು ಬಿಟ್ಟರೆ, ಈ ಜೀವನು ಸಂಸಾರದಲ್ಲೇ ಬಿದ್ದಿರಬೇಕಾಗುವುದು. ವಿವೇಕಿಯಾದ ಬುದ್ಧಿಯಾದರೆ ಜಿತೇಂದ್ರಿಯನಾಗಿ ನಿಯಮದಿಂದ ತನ್ನ ಇಂದ್ರಿಯಗಳನ್ನು ಸರಿಯಾಗಿ ವ್ಯವಹಾರದಲ್ಲಿ ಉಪಯೋಗಿಸಿಕೊಂಡರೆ ಆತನು ಸಂಸಾರಮಾರ್ಗದ ಆಚೆಯಿರುವ ವಿಷ್ಣುಪದವನ್ನು ಪಡೆಯುತ್ತಾನೆ. ಇದನ್ನು ತಿಳಿಸುವುದಕ್ಕಾಗಿ ಶರೀರಾದಿಗಳನ್ನು ರಥಾದಿ ರೂಪಕಗಳಿಂದ ಹೋಲಿಸಿ ಬೋಧಿಸಿರುವುದು.

## 81. ಜೀವನಿಗೆ ಕೊಟ್ಟ ದೃಷ್ಟಾಂತಗಳು

ಪೂರ್ವ ಜನ್ಮದಲ್ಲಿ ಮಾಡಿದ ಪಾಪ ಪುಣ್ಯಗಳನ್ನು, ಮಹಾನದಿಯ ಅಲೆಗಳನ್ನು ನಿವಾರಿಸುವುದಕ್ಕೆ ಹೇಗೆ ಸಾಧ್ಯವಿಲ್ಲವೋ, ಹಾಗೆ ಅವುಗಳನ್ನು ನಿವಾರಿಸುವುದಕ್ಕೆ ಸಾಧ್ಯವಿಲ್ಲ. ಅವುಗಳನ್ನು ಅನುಭವಿಸಲೇ ಬೇಕೆಂದು ತಾತ್ಪರ್ಯ.

ಸಮುದ್ರದಲ್ಲಿ ಉಕ್ಕಿಬರುವ ತೆರೆಯನ್ನು ತಡೆಯಲು ಹೇಗೆ ಅಶಕ್ಯವೋ, ಹಾಗೆ ಜೀವನಿಗೆ ಬರುವ ಮೃತ್ಯುವನ್ನು ತಡೆಯಲು ಅಶಕ್ಯವೇ.

ಕುಂಟನಂತೆ, ಒಳ್ಳೆ ಫಲ, ಕೆಟ್ಟ ಫಲಗಳೆಂಬ ಪಾಶಗಳಿಂದ ಕಟ್ಟಿ ಹಾಕಲ್ಪಟ್ಟು ಈ ಜೀವನು ಬಿಡಿಸಿಕೊಂಡು ಹೋಗದಂತೆ ಕುಳಿತಿರುವನು.

(ಬಂಧನದಲ್ಲಿರುವವನಿಗೆ) ಕಾರಾಗೃಹದಲ್ಲಿ ಬಂಧಿಸಲ್ಪಟ್ಟವನಿಗೆ ಸಾತಂತ್ರ್ಯವಿಲ್ಲದಿರುವಂತೆ ಜೀವಾತ್ಮನಿಗೆ ಸ್ವಾತಂತ್ರ್ಯವಿಲ್ಲ. ಪರಾಧೀನತೆಯೇ ಇರುವುದು.

ಯಮನ ಪಟ್ಟಣದಲ್ಲಿರುವ ಜೀವರಿಗೆ ಬಹು ಭಯಗಳು ಇರುವಂತೆ ಇಲ್ಲಿಯೂ ಕಳ್ಳಕಾಕರ ಭಯ, ರೋಗ ಭಯ, ಹುಲಿ, ಚಿರತೆ, ಹಾವು, ಆನೆಗಳ ಭಯ, ಸಿಡಿಲು ಮಿಂಚು ಇತ್ಯಾದಿ ಭಯಗಳು ಅನೇಕವಾಗಿವೆ.

ಮದ್ಯಪಾನದಿಂದ ಉನ್ಮತ್ತನಾಗಿರುವಂತೆ, ಅಜ್ಞಾನದಿಂದ ಹಲವಾರು ಧನಕನಕ ಸ್ತ್ರೀ ಮೊದಲಾದ ಮೋಹಗಳಿಗೆ ಒಳಗಾಗಿ ಉನ್ಮತ್ತನಾಗುವನು.

ಮಹಾ ಘಟಸರ್ಪದಿಂದ ಕಚ್ಚಲ್ಪಟ್ಟವನಂತೆ ಅತ್ಯಂತ ಕಾಮುಕನಾದವನು ಮೂರ್ಛೆ ಹೊಂದುವನು.

ಕಗ್ಗತ್ತಲೆಯಲ್ಲಿ ಕಾಣದಂತೆ ಅಜ್ಞಾನಾಂಧಕಾರದಲ್ಲಿ ಮುಗ್ಗರಿಸುವನು.

ಭೂತಪ್ರೇತ ಪಿಶಾಚಾದಿ ಪಾಪಿಷ್ಠ ಜೀವಿಗಳಿಂದ ಹಿಡಿಯಲ್ಪಟ್ಟವನಂತೆ ಸಂಸಾರದಲ್ಲಿ ಸುತ್ತುತ್ತಲೇ ಇರುವನು.

## ೮೨. ಸಂಸಾರಕ್ಕೆ ಕೊಟ್ಟ ದೃಷ್ಟಾಂತಗಳು

ಸಂಸಾರದ ಪ್ರಪಂಚವು ಬಾಳೆದಿಂಡಿನಂತೆ ನಿಸ್ಸಾರವಾದದ್ದು.

ಭಿತ್ತಿಯಲ್ಲಿ ಬರೆದ ಚಿತ್ರದಂತೆ ಮೇಲೆ ನೋಡುವುದಕ್ಕೆ ಮನೋಹರವಾಗಿರುವುದು.

ಪದೇ ಪದೇ ರಂಗಸ್ಥಳದ ನಟ ಪುರುಷನಂತೆ ಬದಲಾಯಿಸುತ್ತಲೇ ಇರುವುದು.

ಅಲ್ಲದೆ ಇಂದ್ರಜಾಲದಂತೆಯೂ, ಸ್ವಪ್ನದಂತೆಯೂ ಕಾಣಿಸಿ ಮಾಯವಾಗುವುದು.

## ೮೩. ಕಂಠಚಾಮೀಕರ ನ್ಯಾಯ

ಕತ್ತಿನಲ್ಲೇ ಚಿನ್ನದ ಸರವನ್ನು ಹಾಕಿಕೊಂಡು ಮೇಲೊಂದು ಕೋಟನ್ನು ಹಾಕಿಕೊಂಡು ಒಬ್ಬ ಓಡಾಡುತ್ತಿದ್ದಾನೆಂದು ಇಟ್ಟುಕೊಳ್ಳಿ. ಅವನ್ನು ಮರೆತು ಚಿನ್ನದ ಸರ ಕಳೆದು ಹೋಯಿತೆಂದು ಆತುರದಿಂದ ಅಲ್ಲಿ ಇಲ್ಲಿ ಹುಡುಕುತ್ತಿದ್ದನು. ಆಗ ಸ್ನೇಹಿತನು ಬಂದು ನೋಡಿ "ಏಕೆ ಹುಡುಕುತ್ತೀ? ನಿನ್ನ ಕತ್ತಿನಲ್ಲೇ ಚಿನ್ನದ ಸರ ಇದೆ ನೋಡು" ಎಂದು ಬೋಧಿಸುವನು. ನಂತರ ಕಳೆದುಹೋದ ಸರ ತನಗೆ ಸಿಕ್ಕಿತೆಂದು ಆನಂದ ಪಡುವನು. ಈ ದೃಷ್ಟಾಂತದಲ್ಲಿ ಸರ ಎಲ್ಲಿಯೂ ಹೋಗಿರಲಿಲ್ಲ. ಅವರ ತನ್ನ ಅಜ್ಞಾನದಿಂದ ಕಳೆದುಹೋದಂತೆ ಆಗಿತ್ತು. ತಿಳಿದ ಮೇಲೆ ಸಿಕ್ಕಿದ ಹಾಗಾಯಿತು ಎಂಬುವ ಅರ್ಥವು ನಮಗೆ ಗ್ರಾಹ್ಯವಾಗಿದೆ. ಇದರಂತೆ ನಮ್ಮ ಆತ್ಮಸ್ವರೂಪವೇ ಆಗಿದ್ದ ಬ್ರಹ್ಮವು ಅಜ್ಞಾನದಿಂದ ದೂರ

ವಾಗಿ ನಮಗೆ ಬೇರ್ಪಟ್ಟಿತ್ತು. ತಿಳಿದಮೇಲೆ "ನೀನು ಸಂಸಾರಿಯಲ್ಲ. ನೀನು ಸಚ್ಚಿದಾನಂದ ರೂಪನಾದ ಪರಬ್ರಹ್ಮವೇ" ಎಂಬ ಉಪದೇಶ (ಆಪ್ತ ಗುರುವಿನ ಉಪದೇಶ) ದಿಂದ, ಜ್ಞಾನವು ಉದಯಿಸಿದಾಗ, ತನ್ನ ಸ್ವರೂಪವಾದ ಪರಬ್ರಹ್ಮವು ಲಭಿಸಿತೆಂದು **ಜ್ಞಾನಿಯು** ತಿಳಿಯುವನು.

## ೩೪. ನೌಕೆಯ ದೃಷ್ಟಾಂತ

ಸಮುದ್ರದ ಮೇಲೆ ಹಡಗಿನಲ್ಲಿ ಕುಳಿತು ಸಂಚರಿಸುವಾಗ ಕುಳಿತವರಿಗೆ ಸಮುದ್ರದ ದಡದಲ್ಲಿ ಸಾಲಾಗಿ ನಿಂತಿರುವ ಮರ ಗಿಡಗಳೂ ಸಹ ವೇಗವಾಗಿ ಓಡಾಡುವಂತೆ ಕಾಣಿಸುವುವು. ಹಾಗೆಯೇ ಕೂಟಸ್ಥ, ನಿರ್ವಿಕಾರನಾದ ಆತ್ಮನು ಸ್ವಭಾವವಾಗಿ ಚಲಿಸದೆ ಇರುವವನಾದರೂ ನಮ್ಮ ಬುದ್ಧಿ, ಮನಸ್ಸು, ಶರೀರಗಳು ಓಡಾಡುವಾಗ, ಓಡಾಡುವಂತೆ ಸ್ಪಷ್ಟವಾಗಿ ಕಾಣಿಸುವನು. ಅದರಿಂದ ಇಹಲೋಕದಲ್ಲಿ ಸಂಚರಿಸುವಂತೆ ಪರಲೋಕಕ್ಕೆ, ಬುದ್ಧಿ ಮನಸ್ಸು ಮುಂತಾದ ಸೂಕ್ಷ್ಮ ಶರೀರವು ಈ ಶರೀರವನ್ನು ಬಿಟ್ಟು ಹೊರಟಾಗ, ಆತ್ಮನೂ ಹೊರಟಂತೆ ತಿಳಿಯುವುದು. ಇದೊಂದು ಭ್ರಮೆ. ತತ್ತ್ವಜ್ಞಾನವು ಹುಟ್ಟುವವರೆಗೂ, ನಿಷ್ಕ್ರಿಯನಾದ ಆತ್ಮನಲ್ಲಿ ಕ್ರಿಯೆಯು ತೋರದಿರದು. ಬುದ್ಧಿಯು ಧ್ಯಾನಮಾಡಲು ಆತ್ಮನು ನಿಂತಂತೆಯೂ, ಧ್ಯಾನದಲ್ಲಿರುವಂತೆಯೂ, ಅದು ಲೌಕಿಕ ವ್ಯವಹಾರದಲ್ಲಿ ತೊಡಗಿದಾಗ ಮತ್ತು ಜಪತಪಾದಿಗಳಲ್ಲಿ ನಿರತವಾದಾಗ ಆತ್ಮನು ಚಲಿಸುವಂತೆಯೂ ತೋರಿಬರುವನು. ಇದಕ್ಕೂ ಹಡಗಿನ ದೃಷ್ಟಾಂತವೇ. ಹಡಗು ಹೊರಟರೆ ನಾವು ಹೊರಟಂತೆಯೂ, ಅದು ನಿಂತರೆ ನಾವು ನಿಂತಹಾಗೆಯೂ ಕಾಣುವುದಿಲ್ಲ. ಹಾಗೆಯೇ ಇದು. **"ಬುದ್ಧ್ಯಾ ಧ್ಯಾಯನ್ತ್ಯಾಂ ಧ್ಯಾಯತೀವ, ಲೇಲಾಯನ್ತ್ಯಾಂ ಲೇಲಾಯತೀವ"** ಎಂದು ಈ ವಿಷಯವನ್ನು ವೇದವು ಬೋಧಿಸುವುದು. ಸ್ವತಃ ತನ್ನ ಸ್ವರೂಪದಲ್ಲಿ ಆತ್ಮನು ನಿಷ್ಕ್ರಿಯನು. ನೌಕೆಯ ಭ್ರಮಣದಿಂದ ನಿಂತ ಮರಗಿಡಗಳು ಓಡಾಡುತ್ತಿರುವಂತೆ ತೋರುವುದು ಮಾತ್ರ.

ವಸ್ತುತಃ ಮಾರ್ಗದಗಳು ನಿಂತೇ ಇವೆ. ಅಲ್ಲಾಡಿಸಲ್ಲವೆಂಬುವದರಿಂದ ಆತ್ಮನ ನಿಷ್ಕ್ರಿಯತ್ವವನ್ನು ತಿಳಿಯುಬಹುದು.

## ೮೫. ಪ್ರದೀಪ ದೃಷ್ಟಾಂತ

ಸಗುಣ ಈಶ್ವರನನ್ನು ಉಪಾಸನೆ ಮಾಡುವ ಯೋಗಿಯು ಈಶ್ವರ ಶಕ್ತಿಗಳು ತನ್ನಲ್ಲಿ ಆವಿರ್ಭವಿಸುವುದರಿಂದ, ಸತ್ಯಸಂಕಲ್ಪಾದಿ ಗುಣಗಳೂ ಆವಿರ್ಭವಿಸುವುದರಿಂದ ಒಬ್ಬನೇ ಆಗಿದ್ದರೂ ಅನೇಕ ರೂಪವನ್ನು ತಾಳುತ್ತಾ ಅನೇಕ ಶರೀರಗಳನ್ನು ನಿರ್ಮಿಸಿ ಅವುಗಳಲ್ಲಿ ಪ್ರವೇಶಿಸುವನು. ಉದಾಹರಣೆಗೆ ಸೌಭರಿ ಮಹರ್ಷಿಯು ಭಾರತದಲ್ಲಿ ಪ್ರಸಿದ್ಧನಾಗಿರುವನು. ಈ ಮಹರ್ಷಿಯು ಅನೇಕ ಪುಣ್ಯಗಳನ್ನು ಸಂಪಾದಿಸಿಕೊಂಡು ಯೋಗಿಯಾಗಿ ಅದ್ಭುತವಾದ ಯೋಗಶಕ್ತಿಯನ್ನು ಸಂಪಾದಿಸಿಕೊಂಡಿದ್ದನು. ಒಂದು ದಿನ ಸ್ನಾನಕ್ಕೆ ಹೋದಾಗ ನದಿಯಲ್ಲಿ ಮೀನುಗಳು ಹೆಂಡಿರು, ಮಕ್ಕಳು ಮರಿಗಳಿಂದ ಸುಖಪಡುವುದನ್ನು ನೋಡಿ ಈತನಿಗೆ ತಾನು ಗೃಹಸ್ಥನಾಗಿದ್ದು ಸಂಸಾರ ಸುಖವನ್ನು ಪಡೆಯಬೇಕೆಂದು ಕನ್ಯಾರ್ಥಿಯಾಗಿ ಒಬ್ಬ ರಾಜನ ಬಳಿಗೆ ಹೋದನು- ಬಂದ ಮಹರ್ಷಿಗೆ ರಾಜನು ಆತಿಥ್ಯವನ್ನು ಮಾಡಿ ಬಂದ ಉದ್ದೇಶವನ್ನು ಹೇಳಬೇಕೆಂದು ಕೇಳಿಕೊಂಡನು. ಆಗ ಮುನಿಯು "ನಿನ್ನ ಮಗಳನ್ನು ನನಗೆ ಕೊಟ್ಟು ವಿವಾಹ ಮಾಡು" ಎಂದು ಹೇಳಿದನು. ಮಹರ್ಷಿಯ ರೂಪವನ್ನು ನೋಡಿ ಗಡ್ಡ ಮೀಸೆ ಬೆಳೆಸಿದ ಈ ಕುರೂಪಿಗೆ ಮಗಳನ್ನು ಹೇಗೆ ಕೊಡಲಿ? ಎಂದು ಚಿಂತಿಸಿದನು. ಕೊಡುವುದಿಲ್ಲವೆಂದರೆ ಶಾಪ ಬರುವುದೆಂದು ಹೆದರಿ ಒಂದು ಉಪಾಯ ಮಾಡಿದನು. 'ಪೂಜ್ಯ ಮಹರ್ಷಿಯೇ! ನೀವೇ ನಮ್ಮ ಅಂತಃಪುರಕ್ಕೆ ಹೋಗಿ ಕನ್ಯೆಯನ್ನು ವರಿಸಬೇಕು' ಎಂದು ಹೇಳಲು ಮುನಿಯು ಅವನ ಇಂಗಿತವನ್ನು ತಿಳಿದು, ತನ್ನ ರೂಪವನ್ನುಬದಲಾಯಿಸಿ ಸಾಕ್ಷಾತ್ ಮನ್ಮಥನಂತೆ ಕಾಣುವ ಹಾಗೆ ಯೋಗ ಶಕ್ತಿಯಿಂದ ಮಾಡಿಕೊಂಡು ಅಂತಃಪುರದೊಳಗೆ ಹೋದನು. ಅಲ್ಲಿರುವ ಕನ್ನಿಕೆಯರು (ನೂರಾರು ಜನರು) ಈ ಮುನಿಯ ರೂಪವನ್ನು ನೋಡಿ ಮುಗ್ಧರಾಗಿ ನನ್ನನ್ನು

ಮದುವೆಯಾಗಿ, ನನ್ನನ್ನು ಮದುವೆಯಾಗಿ' ಎಂದು ಮೇಲಿಮೇಲೆ ಬಿದ್ದು ಕೇಳಿಕೊಂಡರು. ಒಂದು ಕೋಲಾಹಲವೇ ಆಯಿತು. ರಾಜನು ದೂರದಲ್ಲಿ ಕೇಳಿ ತಾನಾಗಿಯೇ ಬಂದು ತನ್ನ ಕನ್ನಿಕೆಯರನ್ನು ಮುನಿಯು ಪರಿಗ್ರಹಿಸಲು ಒಪ್ಪಿ ಮದುವೆ ಮಾಡಿಕೊಟ್ಟನು. ಆಗ ಈ ಮುನಿಯು ಒಂದೇ ಜನ್ಮದಲ್ಲಿ ಅನುಭವಿಸಲು ಐನೂರು ಶರೀರಗಳನ್ನು ಯೋಗಬಲದಿಂದ ಸೃಷ್ಟಿಸಿಕೊಂಡು, ದೀಪದಂತೆ, ಎಲ್ಲಾ ಶರೀರಗಳಲ್ಲೂ ಅಂತರಿಂದ್ರಿಯದ ಮೂಲಕ ಪ್ರವೇಶಿಸಿ ಅನೇಕ ವರ್ಷಕಾಲ ಭೋಗಪಟ್ಟನೆಂದು ಕಥೆ. ಇಲ್ಲಿ ಒಂದೇ ದೀಪವು ಅನೇಕ ಬತ್ತಿಗಳಲ್ಲಿ ಪ್ರವೇಶಿಸಿ ಅಂದರೆ ಹೊತ್ತಿಕೊಂಡು ನೂರಾರು ದೀಪಗಳಾಗಿ ಲಕ್ಷೋಪಲಕ್ಷದೀಪಗಳಾಗಿ ಹೇಗೆ ತೋರುವುದೋ ಹಾಗೆಯೇ, ಒಬ್ಬ ಉಪಾಸಕಯೋಗಿಯು ಸಂಕಲ್ಪ ಮಾಡಿದರೆ ಅನೇಕ ಶರೀರಗಳನ್ನು ಸೃಷ್ಟಿಸಿ ಅದರೊಳಗೆ ಪ್ರವೇಶಿಸಬಲ್ಲನು. ನಾನಾ ರೂಪವುಳ್ಳವನಾಗಬಲ್ಲನು. (ಒಂದು ಮುಖ್ಯವಾದ ಮನಸ್ಸನ್ನು ಅನುಸರಿಸಿ ಅನೇಕ ಮನಸ್ಸುಗಳೊಡನೆ ಶರೀರಗಳು ಸತ್ಯಸಂಕಲ್ಪದ ಮಹಿಮೆಯಿಂದ ನಡೆಯಬಲ್ಲವು- ಆಗ ಅನೇಕ ರೂಪ ತಾಳುವನೆಂದು ಇಲ್ಲಿ ತಿಳಿಯಬೇಕು) ಇದೊಂದು ಪತಂಜಲಿಯು ಹೇಳಿದ ಯೋಗಶಾಸ್ತ್ರದ ಪ್ರಕ್ರಿಯೆ.

86. **ಭ್ರಮರ ಕೀಟ ನ್ಯಾಯ**

ಸಮಾಧಿಯಲ್ಲಿರುವ ಜೀವನು ಬ್ರಹ್ಮಾಕಾರವನ್ನು ಹೊಂದುವುದಕ್ಕೆ ಈ ದೃಷ್ಟಾಂತ - ಕೀಟ ಅಂದರೆ ಒಂದು ಹುಳು. ಏಕನಿಷ್ಠೆಯಿಂದ ಭ್ರಮರವನ್ನು (ದುಂಬಿಯನ್ನೇ) ಚಿಂತಿಸುತ್ತಾ ಇದ್ದು ಭ್ರಮರವಲ್ಲದಿದ್ದರೂ ಭ್ರಮರವಾಗಲು ಸಮರ್ಥವಾಗುವುದು. ಹಾಗೆಯೇ ಜೀವನು ತಾನು ಅಜ್ಞಾನದಿಂದ ಬ್ರಹ್ಮನಲ್ಲವೆಂದು ತಿಳಿದಿದ್ದರೂ, ಬ್ರಹ್ಮವನ್ನೇ ಸದಾಧ್ಯಾನ ಮಾಡುತ್ತಲಿದ್ದರೆ ಬ್ರಹ್ಮನೇ ಆಗಿಬಿಡುವನು. ಕೀಟವು ಭ್ರಮರವನ್ನು ಏತಕ್ಕೆ ಚಿಂತಿಸುವುದು? ಕೀಟವು ದುಂಬಿಗೆ ಹೆದರಿಕೊಳ್ಳುವುದು. ತನಗೆ ಹಿಂಸೆ ಕೊಡುತ್ತದೆಯೆಂಬುದೇ ದುಂಬಿಯು

ಹೆದರಿಕೆಗೆ ಕಾರಣ. ಆದರಿಂದಲೇ ಎಲ್ಲಾ ಕೆಲಸವನ್ನೂ ಬಿಟ್ಟು ಅದು ದುಂಬಿಯನ್ನೇ ಸತತ ಚಿಂತಿಸಿ ಭ್ರಮರ ರೂಪವನ್ನು ಹೊಂದುವುದು. ಆದರೆ ದೃಷ್ಟಾಂತದಲ್ಲಿ ಕೀಟವು ನಿಜವಾಗಿ ಭ್ರಮರವೇ ಅಲ್ಲ. ಆದರೂ ಚಿಂತೆಯ ಬಲದಿಂದ ಭ್ರಮರವಾಗುವುದು. ಜೀವಾತ್ಮನು ಹಾಗಲ್ಲ. ನಿಜವಾಗಿ ತಾನು ಬ್ರಹ್ಮವೇ (ಪರಮಾತ್ಮ ಸ್ವರೂಪವೇ) ಆಗಿದ್ದರೂ ಅಜ್ಞಾನದಿಂದ ಬ್ರಹ್ಮನಲ್ಲವೆಂದು ಅರಿತವನು ಪುನಃ ಸದಾ ಬ್ರಹ್ಮಧ್ಯಾನದಿಂದ ನಿಜವಾದ ಬ್ರಹ್ಮವೇ ಆಗಿ ತೋರುವನು.

## 87. ಅಜ್ಞಾನಕ್ಕೆ ಸರ್ಪ ದೃಷ್ಟಾಂತ<br>ಬ್ರಹ್ಮಜ್ಞಾನಕ್ಕೆ ಔಷಧ ದೃಷ್ಟಾಂತ<br>ಔಷಧ ಪಾನ ದೃಷ್ಟಾಂತಗಳು

**ಅಜ್ಞಾನ ಸರ್ಪದಷ್ಟಸ್ಯ ಬ್ರಹ್ಮಜ್ಞಾನೌಷಧಂ ವಿನಾ ।**
**ಕಿಮು ವೇದೈಶ್ಚ ಶಾಸ್ತ್ರೈಶ್ಚ ಕಿಮು ಮಂತ್ರೈಃ ಕಿಮೌಷಧೈಃ ॥**

ಅಜ್ಞಾನವೆಂಬುದು ಸರ್ಪದಂತಿರುವುದು. ಸರ್ಪವು ಕಡಿದರೆ ವಿಷವೇರಿ ಸಾಯುವನು. ತತ್ತ್ವಜ್ಞಾನವಿಲ್ಲದ, ಅಜ್ಞಾನವಿರುವವನಿಗೆ ಸಾವು ಉಂಟು. ಜನ್ಮವೆತ್ತಿದವನಿಗೆ ಸಾವು ಇದ್ದೇ ಇದೆ. '**ಜಾತಸ್ಯ ಹಿ ಧ್ರುವೋ ಮೃತ್ಯುಃ**' ಎಂಬಂತೆ. ಸರ್ಪದ ವಿಷಕ್ಕೆ ಔಷಧವೇ ಶಾಮಕ. ಔಷಧ ಬಿಟ್ಟು ಬೇರೆ ಪರಿಹಾರವಿಲ್ಲ. ಹಾಗೆಯೇ ಅಜ್ಞಾನವು ಬ್ರಹ್ಮಜ್ಞಾನದಿಂದಲೇ ಹೋಗುವುದು. ಅದನ್ನು ಬಿಟ್ಟು ವೇದಗಳು, ಶಾಸ್ತ್ರಗಳು ಮಂತ್ರಗಳು, ಔಷಧಗಳು ಇದ್ದರೂ ಈ ಅಜ್ಞಾನವು ಅವುಗಳಿಂದ ಹೋಗುವುದಿಲ್ಲ. ಹಾಗೂ ಔಷಧವನ್ನು ಪಾನ ಮಾಡಿದರೇ ವ್ಯಾಧಿಯು ಹೋಗುವುದು. ಪಾನ ಮಾಡದೆ ಔಷಧ, ಔಷಧವೆಂಬ ಶಬ್ದವನ್ನು ಪದೇಪದೇ ಉಚ್ಚರಿಸಿದರೆ ವ್ಯಾಧಿಯು ಶಾಂತವಾಗುವುದಿಲ್ಲ, ಹಾಗೆಯೇ, ಬ್ರಹ್ಮಜ್ಞಾನವು ಸಾಕ್ಷಾತ್ ಅನುಭವಕ್ಕೆ ಬಾರದೆ ಕೇವಲ 'ಬ್ರಹ್ಮ ಬ್ರಹ್ಮ' ಎಂದು ಉಚ್ಚರಿಸುವ ಶಬ್ದಗಳಿಂದ, ಅನುಭವವಿಲ್ಲದೆ, ಮುಕ್ತನಾಗುವುದಿಲ್ಲ.

## ೮೮. ನಾನು ರಾಜ ಎಂಬ ಶಬ್ದ ಪ್ರಯೋಗದ ದೃಷ್ಟಾಂತ

ಶತ್ರು ಸಂಹಾರವನ್ನು ಮಾಡದೆ ಸಮಸ್ತ ಭೂಮಿಯ ಸಂಪತ್ತನ್ನು ಹೊಂದದೆ 'ನಾನು ರಾಜ' ಎಂದು ಹೇಳಿಕೊಂಡ (ಜಪಮಾಡಿದ) ಮಾತ್ರದಿಂದ ರಾಜನಾಗುವುದಿಲ್ಲ. ರಾಜ್ಯವನ್ನು ಕಳೆದುಕೊಂಡ ಸುರಥ ಎಂಬ ರಾಜನು ದೇವಿಯ ಅನುಗ್ರಹದಿಂದ ಶತ್ರು ಸಂಹಾರಮಾಡಿ ಮರಳಿ ರಾಜ್ಯವನ್ನು ಪಡೆದು ರಾಜನಾದನೆಂದು ಸಪ್ತಶತಿಯ ಕಥೆ. ಹಾಗೆಯೇ ಪ್ರಪಂಚವನ್ನು ಜ್ಞಾನದಿಂದ ಲಯಗೊಳಿಸದೆ ಆತ್ಮ ತತ್ತ್ವವನ್ನು ಅರಿಯದೆ ಕೇವಲ ಮೋಕ್ಷ ಮೋಕ್ಷವೆಂಬ ಶಬ್ದಗಳನ್ನು ನುಡಿದ ಮಾತ್ರದಿಂದ ಮೋಕ್ಷವಾಗುವುದಿಲ್ಲ

(ವಿವೇಕ ಚೂಡಾಮಣಿ ೬೫ ೬೬)

## ೮೯. ನಿಧಿ ನಿಕ್ಷೇಪ ದೃಷ್ಟಾಂತ

ತತ್ತ್ವವು ಮಾಯೆಯ ಕಾರ್ಯವಾದ ಈ ಪ್ರಪಂಚದಿಂದ ಮುಚ್ಚಿ ಹೋಗಿ ಕಾಣಿಸದೆಹೋಗಿದೆ. ಹೇಗೆಂದರೆ ನಿಧಿ ನಿಕ್ಷೇಪವು ಭೂಮಿಯಲ್ಲಿ ಪ್ರಾಚೀನರಿಂದ ಇರಿಸಲ್ಪಟ್ಟಿದೆ. ಅದು ಕಲ್ಲು ಮಣ್ಣುಗಳಿಂದ ಮುಚ್ಚಿ ಹೋಗಿದೆ. ಎಲ್ಲಿದೆಯೆಂಬುದು ಪತ್ತೆಯಾಗುವುದಿಲ್ಲ, ಕಾಣಿಸುವುದಿಲ್ಲ, ಯಾರಾದರೂ ಅಪ್ತರು ನಿಧಿಯಿರುವ ಸ್ಥಳವನ್ನು ತೋರಿಸಬೇಕು, ಅಮೇಲೆ ಭೂಮಿಯನ್ನು ಅಗೆಯಬೇಕು, ನಂತರ ಮೇಲೆ ಹಾಕಿದ ಕಲ್ಲನ್ನು ಎಳೆದುಹಾಕಿ, ಕೈಯಿಂದ ಮೇಲಕ್ಕೆ ಎತ್ತಬೇಕು, ಅಗಲೇ ನಮಗೆ ಅದು ಸಿಕ್ಕುವುದು. ಇದನ್ನು ಮಾಡದೆ 'ನಿಧಿಯಿದೆ' ಎಂದು ಕೇವಲ ತಾನು ಹೊರಗೆ ಹೇಳಿದ ಮಾತ್ರದಿಂದ ಈ ಶಬ್ದವನ್ನು ಕೇಳಿ ನಿಧಿಯು ಮೇಲಕ್ಕೇನೂ ಎದ್ದು ಬರುವುದಿಲ್ಲ. ಹಾಗೆಯೇ ಅತ್ಮತತ್ತ್ವವು ಶ್ರುತಿಸಮ್ಮತವಾದತರ್ಕ,ಆಪ್ತನಾದ ಬ್ರಹ್ಮಜ್ಞಾನಿಯಉಪದೇಶ,ಶ್ರವಣ ಮನನ, ನಿಧಿಧ್ಯಾಸನ ಇತ್ಯಾದಿ ಸಾಧನಗಳಿಂದಲೇ, ನಮಗೆ ಲಭ್ಯವಾಗುವುದೇ ವಿನಹ ಕೇವಲ ಕುತರ್ಕ ಕುಯುಕ್ತಿಗಳಿಂದ ಅದು ಲಭಿಸುವುದಿಲ್ಲ.

## 90. ಕ್ಷುತ್ ಪಿಪಾಸಾದಿ ನಿವೃತ್ತಿಯ ದೃಷ್ಟಾಂತ

ತನಗೆ ಹಸಿವಾದರೆ ತಾನೇ ಊಟಮಾಡಿ ಹಸಿವನ್ನು ಅಡಗಿಸಿಕೊಳ್ಳಬೇಕು. ತನಗೆ ಬಾಯಾರಿಕೆಯಾದರೂ ತಾನೇ ನೀರು ಕುಡಿದು ಬಾಯಾರಿಕೆಯನ್ನು ನಿವಾರಿಸಿಕೊಳ್ಳಬೇಕು. ಇನ್ನೊಬ್ಬನು ಊಟಮಾಡಿದರಾಗಲಿ, ನೀರು ಕುಡಿದರಾಗಲಿ, ತನ್ನ ಹಸಿವು, ಬಾಯಾರಿಕೆಯೂ, ಅದರ ದುಃಖವೂ ಹೋಗುವುದಿಲ್ಲ. ಅದರಂತೆ ತನ್ನ ಅಜ್ಞಾನದಿಂದ ಉಂಟಾದ ಸಂಸಾರ ಬಂಧನವು ತಾನು ಮಾಡಿಕೊಳ್ಳುವ ಜ್ಞಾನದಿಂದಲೇ ಹೋಗುವುದು. ಮತ್ತೊಬ್ಬನಿಗೆ ಜ್ಞಾನಬಂದರೆ ಅದರಿಂದ ತನಗೆ ಬಂಧ ನಿವೃತ್ತಿಯಾಗುವುದಿಲ್ಲ. ತಲೆಯ ಮೇಲೆ ಭಾರವನ್ನು ಹೊತ್ತಾಗ ಅದರ ದುಃಖವನ್ನು ಮತ್ತೊಬ್ಬನು ಭಾರವನ್ನು ಕೆಳಗೆ ಇಳಿಸಿ ನಿವಾರಿಸಬಹುದು. ಸಂಸಾರದ ಬಂಧನ ನಿವೃತ್ತಿ ಹೀಗಾಗುವುದಿಲ್ಲ

**ಮಸ್ತಕನ್ಯಸ್ತಭಾರಾದೇಃ ದುಃಖಮನ್ಯೈೃತ ನಿರ್ವಾರ್ಯತೇ।**
**ಕ್ಷುಧಾದಿಕೃತ ದುಃಖಂತು ವಿನಾಸ್ವೇನ ನಕೇನಚಿತ್॥**

(ವಿ. ಚೂ. ೫೪)

## 91. ಪಥ್ಯ-ಔಷಧ ಸೇವನೆಯ ದೃಷ್ಟಾಂತ

ರೋಗಿಯಾದವನೇ ಪಥ್ಯವನ್ನು ಮಾಡಬೇಕು. ಔಷಧವನ್ನು ತೆಗೆದು ಕೊಳ್ಳಬೇಕು. ಅದರಿಂದ ತನಗೆ ಆರೋಗ್ಯವಾಗುತ್ತದೆಯೇ ವಿನಃ ಮತ್ತೊಬ್ಬನು ಪಥ್ಯ ಮಾಡಿದರಾಗಲೀ, ಔಷಧಸೇವನೆ ಮಾಡಿದರಾಗಲೀ ತನಗೆ ಆರೋಗ್ಯವಾಗುವುದಿಲ್ಲ ಎಂದಂತೆಯೇ ಸಂಸಾರಬಂಧ ವಿಮೋಚನೆಗೆ ತಾನೇ ಶ್ರವಣ ಮನನಾದಿಗಳಿಂದ ಜ್ಞಾನವನ್ನು ಮಾಡಿಕೊಂಡರೆ ವಿಮೋಚನೆಯಾಗುವುದು. ಶುಕ ವಾಮದೇವಾದಿಗಳು ಜ್ಞಾನಿಗಳಾದರೆ ನಮಗೇನು ಪ್ರಯೋಜನ?

'ಪಥ್ಯಮೌಷಧ ಸೇವಾಚ ಕ್ರಿಯತೇ ಯೇನ ರೋಗಿಣಾ|
ಆರೋಗ್ಯ ಸಿದ್ಧಿ: ದೃಷ್ಟಾಸ್ಯ ನಾನ್ಯಾನುಷ್ಠಿತ ಕರ್ಮಣಾ||
(ವಿ.ಚೂ.63)

## 92 ಗುರಿಯಿಟ್ಟು ಬಿಟ್ಟ ಬಾಣದ ದೃಷ್ಟಾಂತ

ಒಬ್ಬ ಬೇಟೆಗಾರನು ಮೊದಲು ಹುಲಿಯೆಂದು ತಿಳಿದು, ಕಿವಿಪರ್ಯಂತ ಎಳೆದು ಬಿಟ್ಟ ಬಾಣವು, ನಿಲ್ಲುವುದಿಲ್ಲ. ಆಮೇಲೆ ಮುಂದೆ ನಿಂತಿರುವುದು ಹುಲಿಯಲ್ಲ ಹಸು ಎಂದು ತಿಳಿದರೂ, ಬಿಟ್ಟ ಬಾಣವನ್ನು ಹಿಂದಕ್ಕೆ ತೆಗೆದು ಕೊಳ್ಳಲಾಗದೆ, ವೇಗದಿಂದ ಅದು ಹೋಗಿ ಗುರಿಯನ್ನು ಮುಟ್ಟಿ ಹೊಡೆದೇ ಹೊಡೆಯುವುದ. ಹಾಗೆಯೇ ಜ್ಞಾನವು ಹುಟ್ಟುವ ಮುಂಚೆ ಮಾಡಿದ ಕರ್ಮವು, ಫಲವನ್ನು ಕೊಡಲು ಹೊರಟ ಮೇಲೆ ಅದು ತನ್ನ ಫಲವನ್ನು (ಸುಖ ದು:ಖಗಳಲ್ಲಿ ಒಂದನ್ನು)ಕೊಡದೆ ಕ್ಷಯಿಸುವುದಿಲ್ಲ. ಜ್ಞಾನವು ಬಂದ ಮೇಲೂ ಪ್ರಾರಬ್ಧ ಕರ್ಮದ ಫಲವು ಭೋಗವನ್ನು ಕೊಟ್ಟೇ ಕ್ಷಯಿಸುವುದು.

"ಭೋಗೇನ ತ್ವಿತರೇ ಕ್ಷಪಯಿತ್ವಾ ಸಂಪದ್ಯತೇ" ಎಂಬ ಬ್ರಹ್ಮ ಸೂತ್ರವೇ ಇದಕ್ಕೆ ಪ್ರಮಾಣ.

ಜ್ಞಾನೋದಯಾತ್ ಪುರಾರಬ್ಧಂ ಕರ್ಮ ಜ್ಞಾನಾನ್ನನಶ್ಯತಿ|
ಅದತ್ವಾ ಸ್ವಫಲಂ ಲಕ್ಷ್ಯಂ ಉದ್ದಿಶ್ಯೋತ್ಸೃಷ್ಟ ಬಾಣವತ್||
ವ್ಯಾಘ್ರಬುದ್ಧ್ಯಾ ವಿನಿರ್ಮುಕ್ತೋ ಬಾಣ: ಪಶ್ಚಾತ್ತು ಗೋಮತೌ|
ನತಿಷ್ಠತಿ ಛಿನತ್ಯೇವ ಲಕ್ಷ್ಯಂ ವೇಗೇನ ನಿರ್ಭರಂ||ವಿ.ಚೂ-452 454

## 93. ಜಿಗಣೆಯ ದೃಷ್ಟಾಂತ ಮತ್ತು ಹಂಸ ದೃಷ್ಟಾಂತ.

ನಿಗೀರ್ಣಂ ಸಜ್ಜಲೂಕಾದಿ ದುಷ್ಟಂದೇಶಂ ಯಥಾಽಶ್ರಯೇತ್|
ಭಾವನಾಜ್ಞಾನಕರ್ಮಾಣಿ ತಥಾಯಾಂತಿ ತಮುಸ್ವಿನಂ||
ಸಂಪೃಕ್ತಾತ್ ದುಷ್ಟದ್ಧಾಸ್ರಾತ್ ಜಲೂಕಾ ದುಷ್ಟಶೋಣಿತಂ|
ಆದತ್ತೇ ಪ್ರಥಮಂ ಹಂಸ: ಕ್ಷೀರಂಕ್ಷೀರೋದಕಾದಿವ||
(ಬೃ.ವಾ. ಟೀಕಾ)

ಜಿಗಣೆಯು ಅಶುದ್ಧರಕ್ತದಿಂದ ಮಿಶ್ರವಾದ ಶುದ್ಧರಕ್ತವು ನಮ್ಮಲ್ಲಿದ್ದರೂ ಅಶುದ್ಧ ರಕ್ತವನ್ನೇ ಹೀರುವುದು- ನಮ್ಮ ಶುದ್ಧರಕ್ತವನ್ನು ಹೀರುವುದಿಲ್ಲ. ಹಾಗೆಯೇ ಪೂರ್ವ ಜನ್ಮದ ಭಾವನೆ (ವಾಸನೆ), ಜ್ಞಾನ (ಉಪಾಸನೆ), ಕರ್ಮ, ಒಳ್ಳೆಯದು, ಕೆಟ್ಟದ್ದು ಎಂಬುವು ಅಜ್ಞಾನಿಯಾದ ಬದ್ಧ ಜೀವರನ್ನೇ ಆಶ್ರಯಿಸುವುವು. ತತ್ತ್ವಜ್ಞಾನಿಯನ್ನು (ಮುಕ್ತ ಜೀವರನ್ನು) ಆಶ್ರಯಿಸುವುದಿಲ್ಲ.

ಹಂಸವು ನೀರಿನಿಂದ ಮಿಶ್ರವಾದ ಹಾಲಿದ್ದರೆ ಹಾಲನ್ನೇ ಹೀರುವುದು. ನೀರನ್ನು ಬಿಡುವುದು. ಹಾಗೆಯೇ ಪರಮಹಂಸರು ನೀರಸವಾದ ಸಂಸಾರ ಪ್ರಪಂಚವನ್ನು ಬಿಟ್ಟು ಸಾರವಾದ ಬ್ರಹ್ಮಾನಂದವನ್ನೇ ಅವಲಂಬಿಸುವರು

## 94. ಪ್ರವಾಹದಿಂದ ಒಯ್ಯಲ್ಪಡುವ ದಾರು ದೃಷ್ಟಾಂತ

ದಾರು ಎಂದರೆ ಮರ. ನದಿಯ ಪ್ರವಾಹದಿಂದ ಒಂದು ಮರವು ಹೇಗೆ ತಗ್ಗು ಪ್ರದೇಶಕ್ಕೂ ಎತ್ತರ ಪ್ರದೇಶಕ್ಕೂ ಒಯ್ಯಲ್ಪಡುವುದೋ ಹಾಗೆಯೇ ದೈವಬಲದಿಂದ ಆಯಾಯಾ ಕಾಲದಲ್ಲಿ ಅನುಭವಿಸಬೇಕಾದ ಭೋಗಗಳ ಸ್ಥಳಕ್ಕೆ ಈ ದೇಹವು ಒಯ್ಯಲ್ಪಡುವುದು.

**ಸ್ರೋತಸಾ ನೀಯತೇ ದಾರು ಯಥಾ ನಿಮ್ನೋನ್ನತ ಸ್ಥಲಂ |**
**ದೈವೇನ ನೀಯತೇ ದೇಹಃ ಯಥಾಕಾಲೋಪ ಭುಕ್ತಿಷು ||**

## 95. ಬೇರೆ ಪ್ರಕಾಶಕವಿಲ್ಲದ ಸೂರ್ಯನ ದೃಷ್ಟಾಂತ

ಯಾವ ತೇಜಸ್ಸಿನ ಪ್ರಕಾಶದಿಂದ ಜಗತ್ತೆಲ್ಲವೂ ತೋರುವುದೋ, ಅದನ್ನು ಪ್ರಕಾಶಪಡಿಸುವುದಕ್ಕೆ ಮತ್ತೊಂದು ಇಲ್ಲ. ಸೂರ್ಯನಿಂದಲೇ ಈ ಜಗತ್ತು ಪ್ರಕಾಶಿಸುತ್ತಾ ತೋರುತ್ತಿರುವುದು. ಈ ಸೂರ್ಯನನ್ನು ಪ್ರಕಾಶಪಡಿಸುವುದಕ್ಕೆ ಯಾವುದೂ ಇಲ್ಲ. ಈ ಜಗತ್ತು ಸ್ವತಃ ಜ್ಞಾನ ಶೂನ್ಯ, ಅಸ್ತಿತ್ವ ಶೂನ್ಯ. ಕೇವಲ ಮಿಥ್ಯಾವಸ್ತು. ಇದು ತೋರುವುದು,

ಬ್ರಹ್ಮಚೈತನ್ಯ ತೇಜಸ್ಸಿನಿಂದಲೇ. ಇದನ್ನು ಜಗತ್ತು ಪ್ರಕಾಶಗೊಳಿಸಲಾರದು.

**ಭಾನುನೇವ ಜಗತ್ಸರ್ವಂ ಭಾಸತೇ ಯಸ್ಯ ತೇಜಸಾ।**
**ಅನಾತ್ಮಕ ಮಸತ್ತುಚ್ಛಂ ಕಿಂನು ತಸ್ಯಾವಭಾಸಕಮ್॥**
(ವಿ. ಚೂ. ೫೩೪)

96. **ಸ್ವಪ್ನದಲ್ಲಿ ಕಾಣುವ ಜೀವ, ಮಾಯೆಯಿಂದ ಕಲ್ಪಿಸಿದ ಜೀವ, ಮಂತ್ರ, ಔಷಧಿಗಳಿಂದ ರಚಿಸಿದ ನಾಟಕದ ಬೊಂಬೆ, ಈ ದೃಷ್ಟಾಂತಗಳು.**

ಇವುಗಳು, ನೋಡುವಾಗ ಸತ್ಯವಾಗಿರುವಂತೆ ಕಾಣುವುವು. ಸ್ವಪ್ನ, ಮಾಯೆ, ಮಂತ್ರಗಳು ಉಪಸಂಹಾರವಾದ ಮೇಲೆ ಜೀವ, ಬೊಂಬೆ ಇರುವುದಿಲ್ಲ. ಹಾಗೆಯೇ ನಮ್ಮ ಜಾಗರಾವಸ್ಥೆಯಲ್ಲಿ ಸಂಸಾರ ಪ್ರಪಂಚದಲ್ಲಿ ಓಡಾಟ ಮಾಡುತ್ತಿರುವ ಜೀವಾತ್ಮನು ತತ್ತ್ವಜ್ಞಾನವು ಉದಯಿಸಿದ ಕೂಡಲೇ ಮಾಯವಾಗುವುದು. 'ಅಹಮ್' ಎಂಬುದು ಮಿಥ್ಯೆಯಾಗುವುದು. ಜೀವಾತ್ಮನು ಅವಿದ್ಯಾಕಲ್ಪಿತ, ಅಸತ್ಯ. ಕೊನೆಯಲ್ಲಿ ಪರಬ್ರಹ್ಮವಾಗಿಯೇ ನಿಲ್ಲುವುದು.

97. **ಆಕಾಶದಲ್ಲಿ ಹಾರುವ ಹಕ್ಕಿಯ ದೃಷ್ಟಾಂತ**

ಆಕಾಶದಲ್ಲಿ ಹಕ್ಕಿಗಳು ಹಾರುತ್ತಲಿದ್ದರೆ ಅವುಗಳ ಹೆಜ್ಜೆಯು ಆಕಾಶದಲ್ಲಿ ಕಾಣುವುದಿಲ್ಲ. ನೆಲದಮೇಲೆ ನಡೆದರೆ ಹೆಜ್ಜೆಯು ಕಾಣುವುದು. ತತ್ತ್ವಜ್ಞಾನಿಗಳ ಗತಿಯು (ಹೋದ ಮಾರ್ಗವು) ತಿಳಿಯುದಿಲ್ಲವೆಂದು ಈ ದೃಷ್ಟಾಂತದಿಂದ ತಿಳಿಯಬೇಕು. ಬದ್ಧಜೀವರಂತೆ, ತತ್ತ್ವಜ್ಞಾನಿಗಳು ವಿದೇಹ ಕೈವಲ್ಯವನ್ನು ಹೊಂದಿದಾಗ ಎಲ್ಲಿಗೂ ಹೋಗುವುದಿಲ್ಲ. ಜನ್ಮಕ್ಕೆ ಕಾರಣ, ಅಜ್ಞಾನ ಮತ್ತು ಕರ್ಮ, ವಾಸನೆ. ಆಗ ಬದ್ಧಜೀವರು ಸೂಕ್ಷ್ಮಶರೀರದ ಮೂಲಕ ಲೋಕಾಂತರಕ್ಕೆ ಒಂದು ಮಾರ್ಗದಲ್ಲಿ ತೆರಳುವರು. ಜ್ಞಾನಿಗಳಿಗೆ ಅಜ್ಞಾನವೇ ನಾಶವಾಗಿದ್ದಾಗ ಕರ್ಮ, ವಾಸನೆ

ಗಳೂ ನಾಶವಾಗುವುವು. ಜನ್ಮವೇ ಇವರಿಗೆ ಇಲ್ಲ. ಈ ಶರೀರದಿಂದ ಇವರಿಗೆ ಉತ್ಕ್ರಾಂತಿಯೇ ಇಲ್ಲ. ಗತಿ, ಗಮನ, ಆಗಮನಗಳು ಎಲ್ಲಿಂದ ಬರಬೇಕು? ಇವರು ಬ್ರಹ್ಮಸ್ವರೂಪರಾಗಿಯೇ ನಿಲ್ಲುವರು.

## 98. ನೀರಿನಲ್ಲಿ ಓಡಾಡುವ (ಮೀನು, ಜಲಚರ) ಪ್ರಾಣಿಗಳ ದೃಷ್ಟಾಂತ

ನೀರಿನಲ್ಲಿ ಮೀನುಗಳು ಓಡಾಡುತ್ತವೆ. ಆದರೆ ಅವುಗಳ ಹೆಜ್ಜೆಯು ನೀರಿನಲ್ಲಿ ಕಾಣಿಸುವುದೇ ಇಲ್ಲ. ಅದರಂತೆ ತತ್ತ್ವಜ್ಞಾನಿಗಳ ಗತಿಯು ಕಾಣಿಸುವುದಿಲ್ಲ. ಇಲ್ಲಸಂದರ್ಭ.

**ಶಕುನೀನಾ ಮಿವಾಕಾಶೇ ಜಲೇ ವಾರಿಚರಸ್ಯಚ ।**
**ಪದಂ ಯಥಾ ನ ದೃಶ್ಯೇತ ತಥಾ ಜ್ಞಾನವತಾಂ ಗತಿಃ ॥**

ಎಂದು ಭಾಷ್ಯದ ಉದಾಹರಣೆ

## 99. ಬುಡವೇ ಕಿತ್ತುಹೋಗಿರುವ ಮರದ ದೃಷ್ಟಾಂತ

ಬುಡದಲ್ಲಿ ಬೇರುಸಮೇತ ಕಿತ್ತುಹೋಗಿರುವ ಮರವು ನಾವು ಮುಟ್ಟಿದ ಕೂಡಲೇ ಹೇಗೆ ಬಿದ್ದು ಹೋಗುವುದೋ, ಹಾಗೆಯೇ ಬ್ರಹ್ಮಜ್ಞಾನವನ್ನು ಸಂಪಾದಿಸಿದ ಜ್ಞಾನಿಗೆ ಪ್ರಾರಬ್ಧ ಕರ್ಮವು ಭೋಗದಿಂದ ನಿವೃತ್ತಿಹೊಂದಿದೊಡನೆಯೇ ದೇಹವು ಬಿದ್ದುಹೋಗುವುದು. (ವಿದೇಹ ಕೈವಲ್ಯವೆಂದು ಭಾವ)

**ತರೋ ರುತ್ಖಾತ ಮೂಲಸ್ಯ ಸ್ಪರ್ಶೇನೈವ ಯಥಾಕ್ಷಯಃ ।**
**ತಥಾ ಬುದ್ಧಾತ್ಮ ತತ್ತ್ವಸ್ಯ ನಿವೃತ್ತ್ಯೈವ ತನುಕ್ಷಯಃ ॥**

(ನೈಷ್ಕರ್ಮ್ಯ ಸಿದ್ಧಿ –೪)

## 100. ಮೃಷ್ಟಾನ್ನ ಭೋಜನ ಮಾಡಿದವನು ವಿಷವನ್ನು ಎಂದಿಗೂ ಸೇವಿಸುವುದಿಲ್ಲ ಎಂಬ ದೃಷ್ಟಾಂತ

ಮೃಷ್ಟಾನ್ನವನ್ನು ಭೋಜನ ಮಾಡಿ ಹಸಿವನ್ನು ಹೋಗಲಾಡಿಸಿಕೊಂಡವನು, ಮತ್ತೆ ಹಸಿವಾದರೆ ವಿಷಮಿಶ್ರಿತವಾದ ಅನ್ನವನ್ನು ತಿನ್ನಲು ಬಯಸುವುದಿಲ್ಲ. ಹಾಗೆಯೇ ಪ್ರಪಂಚದಲ್ಲೇ ಅತ್ಯಂತ ವಿರಕ್ತನಾದ ಈ ತತ್ತ್ವಜ್ಞಾನಿಯು ಪುನಃ ಈ ಪ್ರಪಂಚದಲ್ಲಿ ಅನುರಾಗವನ್ನು ತೋರಿಸುವುದಿಲ್ಲ. ಜ್ಞಾನಕ್ಕೆ ಮೊದಲೇ ಮೋಕ್ಷವನ್ನೇ ಬಯಸಿ ಬಂದ ಈತನು ಜ್ಞಾನ ಬಂದಮೇಲೆ ಪುನಃ ಪ್ರಪಂಚ ಭೋಗವನ್ನು ಅಪೇಕ್ಷಿಸುವನೇ ?

**ಕ್ಷುಧಯಾ ಪೀಡ್ಯಮಾನೋಽಪಿ ನ ವಿಷಂ ಹ್ಯತ್ತುಮಿಚ್ಛತಿ ।**
**ಮಿಷ್ಟಾನ್ನಧ್ವಸ್ತತೃಟ್ ಜಾನನ್ ನಾ ಮೂಢಸ್ತಜ್ಜಿಘಾಂಸತಿ ॥**
(ನೈಷ್ಕರ್ಮ್ಯ ಸಿದ್ಧಿ - ೪)

## 101 ಜಲದಲ್ಲಿ ವ್ಯತ್ಯಸ್ತವಾಗಿ ತೋರುವ ವೃಕ್ಷ ದಿಗ್ ಭ್ರಾಂತಿಯ ದೃಷ್ಟಾಂತಗಳು

ನದಿಯ ನೀರಿನಲ್ಲಿ ಮರವು ತಲೆಕೆಳಗಾಗಿ ತೋರುವುದು. ಅದರಂತೆ ಅಜ್ಞಾನದಿಂದ ಆತ್ಮನಲ್ಲಿ ದೇಹರೂಪವು ಕಾಣಿಸಿಕೊಳ್ಳುವುದು. (ದೇಹವೇ ಆತ್ಮವೆಂಬ ಭ್ರಮೆಯು ಬರುವುದೆಂದರ್ಥ)

**ಯಥಾ ವೃಕ್ಷ ವಿಪರ್ಯಾಸೋ ಜಲಾದ್ ಭವತಿ ಕಸ್ಯಚಿತ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥**
(ಅಪರೋಕ್ಷಾನುಭೂತಿ)

ಅಜ್ಞಾನದಿಂದ ಒಬ್ಬನಿಗೆ ರಾತ್ರಿಯಲ್ಲಿ ಪಶ್ಚಿಮದಿಕ್ಕು ಪೂರ್ವದಿಕ್ಕೆಂಬ ಭ್ರಾಂತಿಯು ಬರುವುದು. ಅದರಂತೆ ಆತ್ಮನಲ್ಲಿ ದೇಹತ್ವಭ್ರಾಂತಿಯು ಲೋಕಕ್ಕೆ ಇರುವುದು.

**ಯಥೈವ ದಿಗ್ ವಿಪರ್ಯಾಸೋ ಮೋಹಾದ್ ಭವತಿ ಕಸ್ಯಚಿತ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥**
(ಅ- ಭೂ.)

## 102 ಕೋಶಕ್ರಿಮಿ ದೃಷ್ಟಾಂತ

ರೇಷ್ಮೆ ಹುಳುವೇ ಕೋಶಕ್ರಿಮಿ. ಇದು ತನ್ನ ದೇಹದಲ್ಲಿರುವ ಜೊಲ್ಲುಗಳಿಂದ ತಂತುಗಳನ್ನು ಸುತ್ತಲೂ ನಿರ್ಮಿಸಿಕೊಂಡು ಅದರಿಂದಾದ ಕೋಶದ ಮಧ್ಯೆ ಸಿಕ್ಕಿಹಾಕಿಕೊಂಡು ಹೊರಗೆ ಬರಲಾರದೆ ಹೇಗೆ ಸಾಯುವುದೋ ಹಾಗೆಯೇ ಜೀವಾತ್ಮನು ತನ್ನ ಶರೀರವನ್ನು ಆತ್ಮನೆಂದು ಭ್ರಮಿಸಿ ಭೋಗ್ಯ ವಸ್ತುಗಳಿಂದ ಅದನ್ನು ಪೋಷಿಸುತ್ತಾ ಇದ್ದು ದೇಹದಿಂದ ಬಿಡಿಸಿಕೊಳ್ಳಲಾರದೆ ಸಾಯುವನು. ಪುನಃ ಪುನಃ ಜನನ ಮರಣಾದಿ ಸಕಲ ದುಃಖಗಳಿಗೆ ಭಾಗಿಯಾಗುವನು.

**ಕೋಶ ಕ್ರಿಮಿ ಸ್ತಂತುಭಿ ರಾತ್ಮದೇಹಂ**
**ಆವೇಷ್ಟ್ಯ ಚಾವೇಷ್ಟ್ಯ ಚ ಗುಪ್ತಿಮಿಚ್ಛನ್ ।**
**ಸ್ವಯಂ ವಿನಿರ್ಗಂತು ಮಶಕ್ತ ಏವಸನ್**
**ತತಸ್ತದನ್ತಮ್ರಿಯತೇ ಚ ಲಗ್ನಃ ॥**

(ವಿವೇಕ ಚೂಡಾಮಣಿ ಟೀಕಾ-೧೩೯)

## 103 ಸ್ಥೂಲಾರುಂಧತೀ ನಕ್ಷತ್ರ ದೃಷ್ಟಾಂತ

ಮದುವೆಯಲ್ಲಿ ಕನ್ಯೆಗೆ ಅರುಂಧತೀ ನಕ್ಷತ್ರ ದರ್ಶನ ಮಾಡಿಸುವ ಪದ್ಧತಿಯಿದೆ. ಅದು ಸಣ್ಣದಾಗಿರುವುದರಿಂದ ಮೊದಲು ಅದನ್ನು ತೋರಿಸುವುದಕ್ಕೆ ಆಗುವುದಿಲ್ಲ. ಸುತ್ತಲೂ ಇರುವ ದೊಡ್ಡ ನಕ್ಷತ್ರಗಳನ್ನು ನೋಡಿಸಿ ಕೊನೆಯಲ್ಲಿ ಸಣ್ಣ ನಕ್ಷತ್ರವನ್ನು ಅರುಂಧತೀ ನಕ್ಷತ್ರವೆಂದು ತಿಳಿಸುವರು. ಅದರಂತೆ ಸೂಕ್ಷ್ಮವಾದ ಪರಮಾತ್ಮ ಸ್ವರೂಪವನ್ನು ಅತ್ಯಂತ ಮೂಢರಿಗೆ ಮೊದಲು ತಿಳಿಸುವುದಕ್ಕೆ ಸಾಧ್ಯವಾಗದ ಕಾರಣ, ಮೂಢರು ಆತ್ಮವೆಂದು ಭ್ರಮಿಸಿರುವ ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ ಇವುಗಳನ್ನು ಒಂದೊಂದಾಗಿ ಆತ್ಮವೆಂದು ತಿಳಿಸುತ್ತಾ, ಕೊನೆಯಲ್ಲಿ ಆನಂದಮಯ ಕೋಶದಲ್ಲಿ, ಸಕಲಾನಂದಗಳಿಗೆ ಆಧಾರವಾದ ಪರಬ್ರಹ್ಮ ಸ್ವರೂಪಾನಂದವನ್ನು ಮುಖ್ಯಾತ್ಮನೆಂದು ತಿಳಿಸುವರು- (ತೈತ್ತಿರೀಯ)

## 104 ಅಂಧ, ಗೋಲಾಂಗೂಲ ನ್ಯಾಯ

ಎರಡು ಕಣ್ಣುಗಳೂ ಇಲ್ಲದ ಕುರುಡನಿಗೆ ಒಬ್ಬ ದಾರಿಹೋಕನು, ಹಸುವಿನ ಬಾಲವನ್ನು ಹಿಡಿದುಕೊಂಡು ಮನೆಗೆ ಹೋಗು ಎಂದನು. ಆದರೆ ಹಸು ಓಡುತ್ತಾ ಕುರುಡನನ್ನು ಒಂದು ಹಳ್ಳಕ್ಕೆ ಬೀಳಿಸಿತು. ಆತ್ಮನ ತತ್ತ್ವವನ್ನು ಅರಿಯದವನು ಏನೂ ಅರಿಯದ ಮೂರ್ಖಾತ್ಮರಿಗೆ ಇಲ್ಲದ ಸಲ್ಲದ ಆತ್ಮಸ್ವರೂಪವನ್ನು ಬೋಧಿಸಿದರೆ, ಅದನ್ನು ನಂಬಿಕೊಂಡ ಮೂರ್ಖಾತ್ಮರು ಅಂಧನಂತೆ ಸಂಸಾರದ ಹಳ್ಳದಲ್ಲಿ ಮೇಲಕ್ಕೇಳದಂತೆ ಬೀಳುವರು.

## 105 ಬ್ರಹ್ಮಾನಂದಕ್ಕೆ ನಿಧಿ ದೃಷ್ಟಾಂತ

ಭೂಮಿಯಲ್ಲಿ ಹೂತಿಟ್ಟ ನಿಧಿಯು ಮಹಾ ಬಲಿಷ್ಠವಾದ ಮೂರು ಹೆಡೆಯ ಘೋರ ಸರ್ಪದಿಂದ ರಕ್ಷಿಸಲ್ಪಡುವುದು. ಒಬ್ಬ ಧೀರನು ಹರಿತವಾದ ಕತ್ತಿಯಿಂದ ಆ ಮೂರು ಹೆಡೆಯನ್ನು ಕತ್ತರಿಸಿ, ಕೊಂದು, ನಿಧಿಯನ್ನು ಪಡೆದು ಅನುಭವಿಸುವನು. ಇದರಂತೆ ಬ್ರಹ್ಮಾನಂದವೆಂಬ ನಿಧಿಯು, ಪ್ರಬಲವಾದ ಅಹಂಕಾರವೆಂಬುದರಿಂದ ಆವೃತವಾಗಿದ್ದು ಸತ್ವರಜಸ್ತಮೋ ಗುಣಾತ್ಮಕವಾದ ಈ ಸುಖ,ದುಃಖ,ಮೋಹವನ್ನುಂಟು ಮಾಡುವ ಈ ಪ್ರಪಂಚದಿಂದ ಜೀವರಿಗೆ ಸಿಕ್ಕದಂತೆ, ಕಾದಿರಿಸಲ್ಪಟ್ಟಿದೆ. ಒಬ್ಬ ವಿವೇಕಿ ಧೀರಪುರುಷನು ತತ್ತ್ವಜ್ಞಾನವೆಂಬ ಸಾಧನದಿಂದ ಆ ಸತ್ವರಜಸ್ತಮೋಗುಣಗಳುಳ್ಳ ಪ್ರಪಂಚವನ್ನು ಅಹಂಕಾರಸಹಿತ ನಿಃಶ್ಶೇಷಗೊಳಿಸಿ ಸದಾ ಸುಖಮಯವಾದ ಬ್ರಹ್ಮಾನಂದ ನಿಧಿಯನ್ನು ಪಡೆದು ಅನುಭವಿಸುವನು. (ವಿ. ಚೂ. 303)

## 106 ತಪ್ತ ಅಯೋಗೋಳಕ ದೃಷ್ಟಾಂತ

ಬೆಂಕಿಯಿಂದ ಕಾದ ಕಬ್ಬಿಣದ ಗಟ್ಟಿಯು ಸುಡುವುದು. ಕಾಯಿಸದ ಕಬ್ಬಿಣವು ಸುಡುವುದಿಲ್ಲ. ಹೀಗಿರುವಾಗ ಕಾಯಿಸಿದ ಕಬ್ಬಿಣವನ್ನು

ನೋಡಿ, ಇದು ಬೆಂಕಿ, ಇದು ಸುಡುತ್ತದೆಯೆಂದು ಪ್ರಮಿಸಿ ಹೇಳುವೆವು. ಹಾಗೆಯೇ ಬುದ್ಧಿಯು ನಿಜವಾಗಿ ಜಡವಾಗಿದ್ದರೂ ಸಚ್ಚಿದಾನಂದ ರೂಪವಾದ ಪರಮಾತ್ಮನ ಚೈತನ್ಯವು ಬುದ್ಧಿಯಲ್ಲಿ ಪ್ರತಿಬಿಂಬಿಸಿದಾಗ ಬುದ್ಧಿಯೇ ಪ್ರಮಾತಾ(ಜ್ಞಾನವುಳ್ಳವನಾಗಿ), ಮಿತಿ(ಜ್ಞಾನ), ಮೇಯ (ವಿಷಯ) ಈ ರೀತಿಯಾಗಿ ತ್ರಿಪುಟೀ ರೂಪದಲ್ಲಿ ಅನೇಕಾಕಾರವಾಗಿ ಆಗುವುದು. ತತ್ತ್ವಜ್ಞಾನವಾದ ನಂತರ ಈ ಮೂರೂ ಬಾಧಿತವಾಗಿ ಮಿಥ್ಯೆಯೆಂದೇ ಆಗುವುದು. ಅಗ್ನಿ ದೃಷ್ಟಾಂತ ಶುದ್ಧ ಚೈತನ್ಯ ಜ್ಯೋತಿಗೂ, ಕಬ್ಬಿಣವು ಬುದ್ಧಿಗೂ ಹೊಂದುತ್ತದೆ.

## 107 ನಟ ಪುರುಷನ ದೃಷ್ಟಾಂತ

ಶೈಲೂಷ ಎಂದರೆ ನಟ. ನಟ ಪುರುಷನು ಸ್ತ್ರೀ ವೇಷವನ್ನು ಹಾಕಿಕೊಂಡಾಗಲೂ ಪುರುಷನೇ. ಸ್ತ್ರೀಯಲ್ಲ ಎಂಬುದು ಹೇಗೋ ಹಾಗೆಯೇ ಬ್ರಹ್ಮಜ್ಞಾನಿಯು ಯಾವಾಗಲೂ ಬ್ರಹ್ಮವೇ ಬೇರೆಯಲ್ಲ.

**ಶೈಲೂಷೋ ವೇಷ ಸದ್ಭಾವಾಭಾವಯೋಶ್ಚ ಯಥಾಪುಮಾನ್।**
**ತಥೈವ ಬ್ರಹ್ಮವಿಚ್ಛ್ರೇಷ್ಠ: ಸದಾಬ್ರಹ್ಮೈವ ನಾಪರ: ||**

(ವಿ. ಚೂ. ೫೫೬)

## 108 ಮರದಿಂದ ಬೀಳುವ ಎಲೆಯ ದೃಷ್ಟಾಂತ

ಮರದಿಂದ ಒಂದು ಎಲೆಯು ಕಾಲುವೆಯಲ್ಲಾಗಲೀ, ಶಿವಕ್ಷೇತ್ರದಲ್ಲಾಗಲೀ ಬಿದ್ದರೆ ಮರಕ್ಕೆ ಅದರಿಂದ ಪುಣ್ಯವಾಗಲೀ ಪಾಪವಾಗಲೀ ಇಲ್ಲ. ಹಾಗೆಯೇ ಜ್ಞಾನಿಯ ದೇಹವು ಎಲ್ಲಾದರೂ ಬಿದ್ದು ಹೋದರೆ ಜ್ಞಾನಿಗೆ ಒಳ್ಳೆಯದಾಗಲೀ ಕೆಟ್ಟದ್ದಾಗಲೀ ಏನೂ ಆಗುವುದಿಲ್ಲ. ಕಾರಣ ದೇಹಾಭಿಮಾನವು ಮೊದಲೇ ಬಿಟ್ಟು ಹೋಗಿರುವುದು.

**ಕುಲ್ಯಾಯಾಮಥ ನದ್ಯಾಂವಾ ಶಿವಕ್ಷೇತ್ರೇಽಪಿ ಚತ್ವರೇ।**
**ಪರ್ಣಂ ಪತತಿಚೇತ್ತೇನ ತರೋ: ಕಿಂನು ಶುಭಾಶುಭಮ್ ||**

(ವಿ. ಚೂ. ೫೬೦)

ಹಾಗೂ ಪತ್ರೆ, ಪುಷ್ಪ, ಫಲಗಳು ಉದುರಿ ನಾಶವಾದರೂ, ಹೇಗೆ ನಾಶವಾಗದೆ ಮರವು ನಿಂತೇ ಇರುವುದೋ,ಹಾಗೆಯೇ ದೇಹ, ಇಂದ್ರಿಯ ಮನಸ್ಸು, ಬುದ್ಧಿ, ಪ್ರಾಣ ಇವುಗಳು ನಾಶವಾದರೂ ಸಚ್ಚಿದಾನಂದ ರೂಪವಾದ ಜ್ಞಾನಿಯ ಆತ್ಮಸ್ವರೂಪವು ನಾಶವಾಗದೆ ಇದ್ದೇ ಇರುವುದು. (ವಿ. ಚೂ. ೫೬೧)

## 109 ಹಾಲು, ನೀರು, ತೈಲಗಳ ದೃಷ್ಟಾಂತ

ಹಾಲಿನಲ್ಲಿ ಹಾಲನ್ನು, ನೀರಿನಲ್ಲಿ ನೀರನ್ನು ಅಥವಾ ತೈಲದಲ್ಲಿ ತೈಲವನ್ನು ಸುರಿದರೆ, ಅವು ಒಂದೇ ಆಗಿಬಿಡುತ್ತವೆ. ಭೇದವುಂಟಾಗುವುದಿಲ್ಲ. ಎಂಬಂತೆಯೇ ಪರಮಾತ್ಮನಲ್ಲಿ ಬ್ರಹ್ಮಜ್ಞಾನಿಯು ಲೀನನಾದರೆ ಬ್ರಹ್ಮವೇ ಆಗಿ ನಿಲ್ಲುವನು. ಪುನಃ ಭೇದವುಂಟಾಗುವುದಿಲ್ಲ.

**ಕ್ಷೀರಂ ಕ್ಷೀರೇ ಯಥಾ ಕ್ಷಿಪ್ತಂ ತೈಲಂ ತೈಲೇ ಜಲಂ ಜಲೇ |**
**ಸಂಯುಕ್ತ ಮೇಕತಾಂ ಯಾತಿ ತಥಾತ್ಮನ್ಯಾತ್ಮವಿ ನ್ಮುನಿಃ ||**
(ವಿ. ಚೂ. ೫೬೭)

## 110 ಪುಟಕ್ಕೆ ಹಾಕಿದ ಚಿನ್ನದ ದೃಷ್ಟಾಂತ

ಪುಟಕ್ಕೆ ಇಟ್ಟ ಚಿನ್ನದಲ್ಲಿ ಇತರ ಲೋಹದ ಸಂಪರ್ಕದಿಂದ ಉಂಟಾದ ಕಶ್ಮಲವು ಹೋಗಿ ಶುದ್ಧವಾದ ಚಿನ್ನದ ಹೊಳಪು ಹೇಗೆ ಕಾಣುವುದೋ ಹಾಗೆಯೇ ಸತ್ವರಜಸ್ತಮೋಗುಣಗಳ ಕಶ್ಮಲವು ಮನಸ್ಸಿನಲ್ಲಿದ್ದುದು ತತ್ತ್ವಧ್ಯಾನದಿಂದ ಹೋಗಿ ನಿಜ ಶುದ್ಧವಾದ ಬ್ರಹ್ಮಸ್ವರೂಪವು ಕಾಣುವುದು. ಇಲ್ಲಿ ಧ್ಯಾನದ ಬಲದಿಂದ ಕಶ್ಮಲವು ಹೋದಂತೆ ಸಾತ್ವಿಕ ಗುಣದಿಂದ ಅಖಂಡಾಕಾರವಾದ ಪರಬ್ರಹ್ಮ ಸಾಕ್ಷಾತ್ಕಾರವು ಹುಟ್ಟಿ ಮೂಲಾಜ್ಞಾನವನ್ನೂ ಅದರ ಕಾರ್ಯವನ್ನೂ ನಾಶಮಾಡಿ, ತಾನೂ ಲಯವಾಗಿ, ಅಧಿಷ್ಠಾನವಾದ ಪರಬ್ರಹ್ಮ(ಜ್ಯೋತಿ) ಸ್ವರೂಪವು ಪ್ರಕಾಶಿಸುವುದು. (ವಿ. ಚೂ. ೩೬೨)

## 111 ಅತ್ಯಂತ ಕಾಮುಕನ ದೃಷ್ಟಾಂತ

ಲೋಕದಲ್ಲಿ ಒಬ್ಬ ಕಾಮುಕನಾಗಿದ್ದ ಪುರುಷನಿಗೆ ತನ್ನ ಮತ್ತು ಇತರ ಸ್ತ್ರೀಯರಲ್ಲಿ ಕಾಮನೆಯು ಉಂಟಾದರೂ, ತನ್ನ ತಾಯಿಯನ್ನು ನೋಡಿದಾಗ ಈ ಕಾಮನೆಯು ಕುಂಠಿತವಾಗುವುದು. ಹಾಗೆಯೇ ಬಹಳ ಅನಾದಿಕಾಲದಿಂದ ಜ್ಞಾನಕ್ಕೆ ಮುಂಚೆಯೇ ಸಂಪಾದಿಸಿ ಶೇಖರಿಸಿಕೊಂಡಿದ್ದ ಸಂಸಾರ ವಾಸನೆಯು ಬ್ರಹ್ಮವನ್ನು ನೇರ ಸಾಕ್ಷಾತ್ಕಾರ ಮಾಡಿಕೊಂಡಾಗ ಈ ಜ್ಞಾನಿಗೆ (ವಾಸನೆಯು) ಕುಂಠಿತವಾಗುವುದು. ಪುನಃ ಸಂಸಾರ ಬಂಧನವು ಆಗುವುದಿಲ್ಲ.

**ಅತ್ಯಂತ ಕಾಮುಕಸ್ಯಾಪಿ ಸಕ್ತಿ: ಕುಂಠತಿ ಮಾತರಿ |**
**ತಥೈವ ಬ್ರಹ್ಮಣಿ ಜ್ಞಾತೇ ಪೂರ್ಣಾನಂದೇ ಮನೀಷಿಣಃ||**

(ವಿ. ಚೂ. ೪೪೫)

## 112 ಚಂದ್ರ–ಚಿತ್ರಚಂದ್ರರ ದೃಷ್ಟಾಂತ

ಪೂರ್ಣಚಂದ್ರನು ಆಕಾಶದಲ್ಲಿ ಮಹತ್ತಾದ ಆನಂದವನ್ನು ಕೊಡುತ್ತಾ ಪ್ರಕಾಶಿಸುವಾಗ, ಅದನ್ನು ಬಿಟ್ಟು ಚಿತ್ರದಲ್ಲಿ ಬರೆದ ಚಂದ್ರನನ್ನು ನೋಡುವುದಕ್ಕೆ ಯಾರು ಅಪೇಕ್ಷೆಪಡುವರು? ಹಾಗೆಯೇ ತತ್ತ್ವಜ್ಞಾನಿಗಳು, ಪರಬ್ರಹ್ಮಾನಂದ ರಸಾನುಭವವಾಗುವಾಗ ಅದನ್ನು ಬಿಟ್ಟು ಆನಂದ ಶೂನ್ಯವಾದ ನೀರಸವಾದ ಈ ಪ್ರಪಂಚವನ್ನು ಅಪೇಕ್ಷಿಸ್ಸುವರೇ? ಅಪೇಕ್ಷಿಸುವುದಿಲ್ಲವೆಂದರ್ಥ.

**ಕಸ್ತಾಂ ಪರಾನಂದ ರಸಾನುಭೂತಿಂ**
**ಉತ್ಸೃಜ್ಯ ಶೂನ್ಯೇಷು ರಮೇತ ವಿದ್ವಾನ್ |**
**ಚಂದ್ರೇ ಮಹಾಹ್ಲಾದಿನಿ ದೀಪ್ಯಮಾನೇ**
**ಚಿತ್ರೇಂದು ಮಾಲೋಕಯಿತುಂ ಕ ಇಚ್ಛೇತ್ ||**

(ವಿ. ಚೂ.–೫೨೩)

## 113 ಸ್ಥೂಣಾನಿಖನನ ನ್ಯಾಯ

ಗುಡಾರವನ್ನು ಹಾಕುವಾಗ ಒಂದು ದೊಡ್ಡ ಕಂಬವನ್ನು ಮಧ್ಯೆ ಹೂಳುವರು. ಅದನ್ನು ಒಂದು ಸಲ ಹೂಳಿದ್ದರೂ ಪುನಃ ಮೇಲಕ್ಕೆ ಎತ್ತಿ ಎತ್ತಿ ಕುಣಿಯಲ್ಲಿ ಕೂರಿಸಿ ಹೂಳುವರು. ಆಗ ಅದು ಅಲ್ಲಾಡದೆ ಗಟ್ಟಿಯಾಗಿ ನಿಲ್ಲುವುದು.

ಬ್ರಹ್ಮಸೂತ್ರದ ೧ನೆ ಅಧ್ಯಾಯದಲ್ಲಿ, ಅದ್ವಿತೀಯ ಬ್ರಹ್ಮವೇ ಜಗತ್ತಿಗೆ ಕಾರಣವೆಂಬ ಸಿದ್ಧಾಂತವನ್ನು ವೇದಾಂತಗಳಲ್ಲಿ ನಿರ್ಣಯಿಸಿದ್ದರೂ, ೨ನೆ ಅಧ್ಯಾಯದಲ್ಲಿ ಮತಾಂತರದ ಆಕ್ಷೇಪವನ್ನು ತೆಗೆದು ಸಿದ್ಧಾಂತವನ್ನು ಅಲ್ಲಾಡಿಸಿ ಆಕ್ಷೇಪ ಪರಿಹಾರ ಮಾಡಿ, ಅದನ್ನೇ ಸ್ಥಿರ ಪಡಿಸುವರು.

—ಮಂಗಳಂ—

॥ ಶ್ರೀ ಕೃಷ್ಣಾರ್ಪಣಮಸ್ತು ॥



ಕುಮಾರ್ ಪ್ರಿಂಟರ್ಸ್, ಬೆಂಗಳೂರು-19